॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೮ ಜೂನ್ ೨೦೦೨ ಸಂಚಿಕೆ : ೬

ಮುಖಪುಟ
ಶ್ರೀಮಠದಲ್ಲಿ ವಿದ್ಯಾರ್ಥಿಗಳ ಪ್ರವೇಶ ಪ್ರಕ್ರಿಯೆ – ವಿವಿಧ ದೃಶ್ಯಾವಳಿಗಳು

## ಒಳಪುಟಗಳಲ್ಲಿ .............



ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೪
ದೂರವಾಣಿ : ೩೬೦೪೦೮೭



ವಿಳಾಸ :
''ಸಂಪಾದಕರು'', 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/- |
| ಆಜೀವ ಸದಸ್ಯತ್ವ | ರೂ. ೫೦೦/- |
| ಬಿಡಿ ಪ್ರತಿ | ರೂ. ೧೦.೦೦ |



## ಪರೀಕ್ಷಾ ಫಲಿತಾಂಶ ಮತ್ತು ಪ್ರವೇಶಾವಕಾಶ.......

ಪಿ.ಯು.ಸಿ. ಮತ್ತು ಎಸ್.ಎಸ್.ಎಲ್.ಸಿ. ಪರೀಕ್ಷಾ ಫಲಿತಾಂಶಗಳು ಬಂದಿವೆ. ಮನೆ ಮನೆಗಳಲ್ಲಿ ಪ್ರತಿಧ್ವನಿ ಕೇಳಿಸುತ್ತಿದೆ. ಶಾಲಾ ಕಾಲೇಜುಗಳು ಎದೆಯುಬ್ಬಿಸಿ ಹೇಳಿಕೊಳ್ಳುತ್ತಿವೆ ತಮ್ಮ ಪ್ರಗತಿಗಾಥೆಯನ್ನು. ಕೆಲವು ಮಕ್ಕಳು ಕಣ್ಣೀರು ಹಾಕುತ್ತಿದ್ದಾರೆ. ಅನ್ನ ನೀರು ಬಿಟ್ಟಿದ್ದಾರೆ, ಮೌನಲೋಕದ ಮಾತಿಲಿಗಳಾಗಿದ್ದರೆ. ಫೇಲಾದೆವೆಂದೋ, ಅದುಕೊಂಡಂತೆ ಪಾಸಾಗಲಿಲ್ಲವೆಂದೋ, ಲೆಕ್ಕ ಹಾಕಿದಂತೆ ಮಾರ್ಕ್ಸ್ ಬರಲಿಲ್ಲವೆಂದೋ ಹಲುಬುತ್ತಿದ್ದಾರೆ. ಗೆದ್ದವರು ಮುಂದಿನ ಯೋಜನೆಯ ಬಗ್ಗೆ ಚಿಂತನೆ ನಡೆಸಿದ್ದಾರೆ. ಯಾವ ಕಾಲೇಜು ಸೇರುವುದು? ಯಾವ ಕೋರ್ಸಿಗೆ ಹೋಗುವುದು? ಎಂಬುದೇ ಮುಂದಿರುವ ಪ್ರಶ್ನೆಯಾಗಿದೆ. ಅದಕ್ಕಾಗಿ ಅನುಭವಗಳ, ಬಂಧು ಬಳಗದವರ ಮಾರ್ಗದರ್ಶನಕ್ಕಾಗಿ ಅಲೆದಾಟ. ಮೊನ್ನೆ ನಡುರಾತ್ರಿ ನನ್ನ ಪೋನು ಟ್ರಣ್ ಟ್ರಣ್ ಎಂದಿತು. ನನಗೆ ಹಾಗೂ ಮನೆಯವರಿಗೆ ಗಾಬರಿಯಾಯಿತು. ಇದೇನು ಇಷ್ಟೊತ್ತಿನಲ್ಲಿ ಪೋನು. ಯಾರದಿರಬಹುದು? ಏನು ಕೆಟ್ಟ ಸುದ್ದಿ ಸಂದೇಶವೋ ಎಂದು ಪೋನ್ ಎತ್ತಿದೆ. ''ಸಾರ್ ನಮ್ಮುಡಗ ಎಸ್.ಎಸ್.ಎಲ್.ಸಿ.ಯಲ್ಲಿ ಪಾಸಾಗಿದ್ದಾನೆ. ಮುಂದೆ ಯಾವ ಕಾಲೇಜಿಗೆ ಸೇರಿಸಬೇಕೆಂಬುದೇ ನಮಗೆ ದೊಡ್ಡ ಚಿಂತೆಯಾಗಿದೆ. ನೀವೇ ಹೇಳಿ ಯಾವ ಕಾಲೇಜಿಗೆ ಸೇರಿಸುವುದು? ಜೊತೆಗೆ ಯಾರ ಹತ್ತಿರ ಟ್ಯೂಷನ್‌ಗೆ ಕಳಿಸುವುದು?'' ಎಂದು ಕೇಳಿದರು. ನನಗೋ ಏನು ಹೇಳುವುದು ಇವರಿಗೆ ಎಂದು. ಏನೂ ತೋಚದಾಯಿತು. ತುಂಬಾ ಸಂತೋಷ; ನಿಮ್ಮ ಹುಡುಗನಿಗೆ ಅಭಿನಂದನೆ ಹೇಳಿ. ನಾಳೆ ಬೆಳಗ್ಗೆ ಸಮಾಲೋಚಿಸೋಣ ಎಂದು ಪೋನು ಕೆಳಗಿಟ್ಟೆ. ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ಕಾಳಜಿ ವಹಿಸುವ ಪೋಷಕರ ಒಂದು ಚಿತ್ರ ಇದಾದರೆ; ಇನ್ನೊಂದನ್ನು ಕೇಳಿ. ನಿನ್ನೆ ಶ್ರೀಮಠಕ್ಕೆ ಹೋಗಿದ್ದೆ. ಸಾವಿರಾರು ಮಂದಿ ಮಠದ ಮುಂದೆ. ಶ್ರೀಗಳವರ ಕಾರ್ಯಾಲಯದ ಮುಂದೆ, ಕಾಲಿಡಲು ಜಾಗವಿಲ್ಲದಷ್ಟು ಜನ. ಅವರಲ್ಲಿ ಎಲ್ಲ ವಯಸ್ಸಿನವರು, ಹೆಂಗಸರು, ಗಂಡಸರು. ಶ್ರೀಗಳವರು ಇರಲಿಲ್ಲ. ಬೆಂಗಳೂರಿಗೆ ಕಾರ್ಯಕ್ರಮದಲ್ಲಿ ಭಾಗವಹಿಸಲು ತೆರಳಿದ್ದರು. ಸಂಜೆ ಎಂಟರ ಸಮಯ. ಬೆಂಗಳೂರಿನಿಂದ ಶ್ರೀಗಳವರು ಬಂದರು. ಬಂದವರು ನೇರವಾಗಿ ಉದ್ಧರಣೆಗಳನ್ನು ಕಟ್ಟುವ ಮಂಚದ ಬಳಿಗೆ ನಡೆದರು. ಅಲ್ಲಿಗೇ ಧಾವಿಸಿದರು ಬಂದ ಜನ. ಆ ಚಿತ್ರನೋಡಬೇಕಿತ್ತು. ಜೇನು ಹುಳುಗಳು ಮುತ್ತಿದಂತಿತ್ತು. ಅವರೆಲ್ಲರ ಕೈಯಲ್ಲಿ ಅರ್ಜಿಗಳು. ಶ್ರೀಮಠಕ್ಕೆ ತಮ್ಮ ಮಕ್ಕಳನ್ನು ಸೇರಿಸಲು ಅಪ್ಲಿಕೇಷನ್ ಕೊಡಿಸಿಸಬೇಕೆಂದು. ಅವರೆಲ್ಲ ಶ್ರೀಮಠದ ಸುತ್ತಮುತ್ತಿನ ಹಳ್ಳಿಯವರಲ್ಲ, ದೂರದೂರದವರು. ಉತ್ತರ ಕರ್ನಾಟಕದ ಬೀದರ್, ಬಿಜಾಪುರ, ಬಳ್ಳಾರಿ, ಗುಲ್ಬರ್ಗಾ, ರಾಯಚೂರು, ಧಾರವಾಡಗಳ ಕಡೆಯಿಂದ ಬಂದವರು. ಅವರ ಉಡುಗೆ ತೊಡಿಗೆಯೇ, ಮಾತನಾಡುವ ವರಸೆಯೇ ಅವರು ಬಂದ ಊರು ಕೇರಿಗಳನ್ನು ಪರಿಚಯಿಸುತ್ತಿತ್ತು. ಜೊತೆಗೆ ಮಕ್ಕಳನ್ನೂ ಕರೆತಂದವರೆಷ್ಟೋ ಮಂದಿ. ಆ ಮಕ್ಕಳಾದರೂ ತುಂಬಾ ಎಳೆವಯಸ್ಸಿನವರೂ ಕೂಡ.

ಶ್ರೀಗಳವರಿಗೆ ತೊಂಬತ್ತೈದರ ತುಂಬು ಪ್ರಾಯ. ನೂರಾರು ಕಿಲೋಮೀಟರ್ ಪ್ರಯಾಣ ಮಾಡಿಬಂದರೂ ದಣಿವರಿಯದೆ ದುಡಿಯುವ ತಪಸ್ವಿಗಳು. ಬಳಿಗೆ ಬಂದ ಒಬ್ಬೊಬ್ಬರನ್ನೂ ಮೆಲ್ಲಗೆ ನಿಧಾನವಾಗಿ ವಿಚಾರಿಸಿ ಅರ್ಜಿಕೊಡಿಸುವ ಪರಿಪಾಠ. ''ಅದೊಂದು ಲೀಲೆ''. ಶ್ರೀಗಳು ಬಂದವರೊಡನೆ ಮಾತಾಡುವ ರೀತಿ ಆತ್ಮೀಯವೆಂದರೆ ಆತ್ಮೀಯ. ಎಲ್ಲರೊಂದಿಗೆ ಹಳ್ಳಿಗನಿರಲಿ, ಪಟ್ಟಣಿಗನಿರಲಿ ಎಲ್ಲರಿಗೆ ಸಂತೋಷವಾಗುವಂಥ ಮಾತುಗಳು. ''ಪ್ರಸಾದ ಮಾಡಿ'' ಎಂಬ ''ಹೊಟ್ಟೆನೋಡುವ'' ಭೂತಾನು ಕಂಪೆಯ ನುಡಿಗಳು. ಬಂದವರು ಧನ್ಯರಾದೆವು ಎಂಬ ಭಾವನೆಯೊಂದಿಗೆ ಪರಸ್ಪರ ಆಡಿಕೊಳ್ಳುವ ಮಾತುಗಳು. ಶ್ರೀಗಳು ನೋಡುವುದು ಮಕ್ಕಳ ಅಂಕಪಟ್ಟಿಯನ್ನಲ್ಲ, ಬಡತನದ ಬವಣೆಯ ಸ್ಥಿತಿಯನ್ನು, ಸಾವಿರ ಸಾವಿರ ಸಂಖ್ಯೆಯಲ್ಲಿ ಶ್ರೀಮಠಕ್ಕೆ ಪ್ರವೇಶಾವಕಾಶ ಎಂಬತ್ತು, ತೊಂಬತ್ತು ಅಂಕಗಳನ್ನು ತೆಗೆದವರಷ್ಟೆ ಮುಖ್ಯವಲ್ಲ, ಮೂವತ್ತೈದು ತೆಗೆದವರೂ ಓದಬೇಕು. ಅಕ್ಷರ ಬೆಳಕಿನಲ್ಲಿ ಬಾಳಬೇಕು. ಪರಿಸರ ಅವಕಾಶದಿಂದ ಯಾರೂ ವಂಚಿತರಾಗಬಾರದು ಎಂಬುದೇ ಶ್ರೀಗಳವರ ಧ್ಯೇಯ. ಶ್ರೀಮಠ ಯಾವುದೇ ಒಂದು ವರ್ಗಕ್ಕೆ, ಜಾತಿಗೆ ಸೀಮಿತವಾಗಬಾರದು ಎಂಬ ಎಚ್ಚರ ಶ್ರೀಗಳವರಿಗೆ. ಜ್ಞಾನ ಪ್ರತಿಭೆ, ಪಾಂಡಿತ್ಯಗಳು ಸಾರ್ವತ್ರಿಕ ಸಂಪತ್ತಾಗಬೇಕೆಂಬುದೇ ಶ್ರೀಗಳವರ ಹಂಬಲ. ಅದಕ್ಕಾಗಿ ಅವರ ದುಡಿಮೆ. ದಣಿವರಿಯದ ದುಡಿಮೆ. ಪೂರ್ವಪ್ರಾಥಮಿಕ ತರಗತಿಯಿಂದ ಸ್ನಾತಕೋತ್ತರ ತರಗತಿಯವರೆಗಿನ ವಿದ್ಯಾರ್ಥಿಗಳಿಗೆ ಶ್ರೀಮಠದಲ್ಲಿ ಅವಕಾಶ. ಇದೊಂದು ಪುಟ್ಟ ವಿಶ್ವವಿದ್ಯಾಲಯ; ಸಂಕ್ಷಿಪ್ತ ರಾಜ್ಯ, ಸಂಸ್ಕೃತ, ಕನ್ನಡ, ಸಾಹಿತ್ಯ, ವಿಜ್ಞಾನ, ತಂತ್ರಜ್ಞಾನ, ಔಷಧಜ್ಞಾನ, ಆಧ್ಯಾತ್ಮಜ್ಞಾನಗಳ ಸಂಗಮ; ಲೋಕ ಶಿಕ್ಷಣದ ಕಮ್ಮಟ, ಆತ್ಮಶಿಕ್ಷಣದ ಅಂಗಳ.

– ಸಂಪಾದಕ







## ಶ್ರೇಷ್ಠ ಯಾರು?

ಒಮ್ಮೆ ಹುಲಿಗಳು ಒಂದೆಡೆ ಸೇರಿ ಸಭೆಯನ್ನು ನಡೆಸಿದವು. ಬಹಳ ದಿನಗಳಿಂದ ಅವುಗಳಲ್ಲಿ ಒಂದು ಸಮಸ್ಯೆ ಕಾಡುತ್ತಿತ್ತು. ಅದೇನೆಂದರೆ ಸೃಷ್ಟಿಯ ಜೀವಜಾಲದಲ್ಲಿ ಶ್ರೇಷ್ಠರು ಯಾರು? ಎಂಬುದಾಗಿತ್ತು. ಅಲ್ಲದೆ ತಮ್ಮನ್ನು ಎಲ್ಲರೂ ಶ್ರೇಷ್ಠರು ಯಾರು ಎಂದು ಕೇಳುತ್ತಲೇ ಇದ್ದರು. ಮನುಷ್ಯ ಶ್ರೇಷ್ಠನೆಂದು ಎಲ್ಲರೂ ತಿಳಿದುಕೊಂಡಿದ್ದರು. ಆದರೆ ಶ್ರೇಷ್ಠತೆಯನ್ನು ಅಳೆಯುವುದಾದರೂ ಹೇಗೆ? ಎಂದು ಆಲೋಚಿಸುತ್ತಲೇ ಇದ್ದವು. ಸಭೆಯಲ್ಲಿ ಸಮಸ್ಯೆಗೆ ವಿವಿಧ ಉತ್ತರಗಳು ಬಂದವು. ಮನುಷ್ಯ ಮಾತನಾಡುತ್ತಾನೆ ಆದರಿಂದ ಶ್ರೇಷ್ಠ ಎಂದವು ಕೆಲವು ಹುಲಿಗಳು. ಅವನು ಸಂಗೀತ ಬಲ್ಲವನಾಗಿದ್ದಾನೆ ಆದರಿಂದ ಶ್ರೇಷ್ಠ ಎಂದವು ಇನ್ನು ಕೆಲವು. ಮನುಷ್ಯ ಒಳ್ಳೊಳ್ಳೆಯ ಬಟ್ಟೆ ಬರೆ ತೊಡುತ್ತಾನೆ, ಚಿನ್ನ ಬೆಳ್ಳಿಯ ಒಡವೆ ಹಾಕಿಕೊಳ್ಳುತ್ತಾನೆ ಆದರಿಂದಾಗಿ ಶ್ರೇಷ್ಠನಾಗಿದ್ದಾನೆ ಎಂದವು. ಮತ್ತೆ ಕೆಲವು ಅಲ್ಲಲ್ಲ, ಮನುಷ್ಯ ಹಕ್ಕಿಯಂತೆ ಆಕಾಶದಲ್ಲಿ ಹಾರಾಡುತ್ತಾನೆ, ಅದಕ್ಕಾಗಿ ವಿಮಾನಗಳನ್ನು ನಿರ್ಮಾಣಮಾಡಿದ್ದಾನೆ. ನೀರಿನಲ್ಲಿ ಮೀನಿನಂತೆ ಈಜುತ್ತಾನೆ, ಅದಕ್ಕಾಗಿ ಹಡಗು ನಿರ್ಮಿಸಿದ್ದಾನೆ. ಆದರಿಂದಾಗಿ ಶ್ರೇಷ್ಠನಾಗಿದ್ದಾನೆ ಎಂದವು ಒಂದಷ್ಟು ಹುಲಿಗಳು. ಹಾಗಲ್ಲ ಮನುಷ್ಯ ರೇಡಿಯೋ ಟಿ.ವಿ.ಗಳನ್ನು, ಫೋನು, ಮೊಬೈಲ್ ಫೋನುಗಳನ್ನು ಕಂಡುಹಿಡಿದಿದ್ದಾನೆ. ಆದರಿಂದ ಶ್ರೇಷ್ಠನಾಗಿದ್ದಾನೆ ಎಂದವು ಮತ್ತಷ್ಟು ಹುಲಿಗಳು. ಇಲ್ಲ, ಮನುಷ್ಯ ಕಾಡುಪ್ರಾಣಿಗಳಾದ ನಮ್ಮನ್ನು, ಆನೆಗಳನ್ನು, ಸಿಂಹಗಳನ್ನು, ಚಿರತೆಗಳನ್ನು ಹಿಡಿದು ಪಳಗಿಸಿ ಸರ್ಕಸ್ ಮಾಡಿಸುತ್ತಾನೆ ಅದಕ್ಕಾಗಿ ಶ್ರೇಷ್ಠನಲ್ಲವೆ? ಎಂದವು ಕೆಲವು ಹುಲಿಗಳು. ಹೀಗೆಯೇ ನಾನಾ ರೀತಿಯ ಅಭಿಪ್ರಾಯಗಳು ಸಭೆಯಲ್ಲಿ ವ್ಯಕ್ತವಾದುವು.

ಎಲ್ಲ ಅಭಿಪ್ರಾಯಗಳನ್ನು ಶಾಂತವಾಗಿ ಕೇಳುತ್ತಿದ್ದ ಒಂದು ವಯಸ್ಸಾದ ಹುಲಿ ಹೇಳಿತು. ನಿಮ್ಮೆಲ್ಲರ ಅಭಿಪ್ರಾಯಗಳೂ ಸರಿಯಾಗಿವೆ ಎನಿಸುತ್ತದೆ. ಆದರೆ ಯೋಚಿಸಿನೋಡಿ ಮನುಷ್ಯನ ಶ್ರೇಷ್ಠತೆಯನ್ನು ಗುರುತಿಸಲು ಇನ್ನೇನೋ ಬೇರೆ ಕಾರಣಗಳಿರಬೇಕೆನಿಸುವುದಿಲ್ಲವೆ? ಎಂದು ಮತ್ತೆ ಎಲ್ಲ ಹುಲಿಗಳನ್ನು ಪ್ರಶ್ನೆ ಮಾಡಿತು. ಸಭೆಯಲ್ಲಿದ್ದ ಹುಲಿಗಳೆಲ್ಲ ಇನ್ನೇನಿರಬಹುದು ಶ್ರೇಷ್ಠತೆಗೆ ಅಳತೆಗೋಲು ಎಂದು ಯೋಚಿಸಲು ಪ್ರಾರಂಭಿಸಿದವು. ಆದರೆ ಯಾವ ಹುಲಿಯೂ ಏನನ್ನೂ ಹೇಳಲಾರವಾದವು. ಆಗ ವಯಸ್ಸಾದ ಹುಲಿಯೇ ಹೇಳಿತು. ಮನುಷ್ಯನ ಶ್ರೇಷ್ಠತೆಯನ್ನು ಅವನಲ್ಲಿರುವ ದೌರ್ಬಲ್ಯಗಳಿಂದ ಅಳೆಯಬಹುದಲ್ಲವೆ? ಎಂದಿತು. ಸಭೆಯಲ್ಲಿದ್ದ ಹುಲಿಗಳಿಗೆ ಅರ್ಥವಾಗಲಿಲ್ಲ. ಅವು ಕೇಳಿದುವು. ಅದೇ ಹೇಗೆ? ಎಂದು. ವಯಸ್ಸಾದ ಹುಲಿ ಹೇಳಿತು. ದೌರ್ಬಲ್ಯಗಳೆಂದರೆ ದುಶ್ಚಟಗಳು. ಅಂದರೆ ಕೆಟ್ಟ ಹವ್ಯಾಸಗಳು. ಈಗ ನೋಡಿ ನಾವ್ಯಾರಾದರೂ ಎಂದಾದರೂ ಒಮ್ಮೆಯಾದರೂ ತುಂಬಾಕು ಅಂದರೆ ಹೊಗೆಸೊಪ್ಪು ಸೇವಿಸಿದ್ದೇವೆಯೆ? ಅದರಿಂದ ಮಾಡಿದ ಬೀಡಿ, ಸಿಗರೇಟು ಇತ್ಯಾದಿಗಳನ್ನು ಸೇದುತ್ತೇವೆಯೇ? ಹೊಗೆಸೊಪ್ಪು ಹೊಲದಲ್ಲಿ ಓಡಾಡಿದ್ದೇವೆಯೇ? ಇಲ್ಲವಲ್ಲ. ಅಂತೆಯೇ ನಾವ್ಯಾರಾದರೂ ಹೆಂಡ, ಸಾರಾಯಿ, ಬ್ರಾಂದಿ, ಬೀರು ಮುಂತಾದ ಮದ್ಯಪಾನೀಯಗಳನ್ನು ಕುಡಿದಿದ್ದೇವೆಯೇ? ಇಲ್ಲವಲ್ಲ. ಅಥವಾ ನಮ್ಮ ನಮ್ಮಲ್ಲಿ ಕಡಿದಾಡಿ ಸ್ವಜಾತಿಯವರನ್ನು ಕೊಂದು ಹಾಕಿದ್ದುಂಟೆ? ಇಲ್ಲವಲ್ಲ. ಆದರೆ ಈ ಶ್ರೇಷ್ಠನೆನಿಸಿಕೊಂಡಿರುವ ಮನುಷ್ಯ, ತಂಬಾಕು ಸೇದುತ್ತಾನೆ, ಮದ್ಯಪಾನಮಾಡುತ್ತಾನೆ, ಮನುಷ್ಯರನ್ನೇ ಕೊಲ್ಲುತ್ತಾನೆ, ಹೀಗಿರುವಾಗ ಮನುಷ್ಯ ಶ್ರೇಷ್ಠ ಹೇಗಾಗುತ್ತಾನೆ? ನೀವೇ ಹೇಳಿ ಎಂದಿತು. ಅದಕ್ಕೆ ಸಭೆಯಲ್ಲಿದ್ದ ಎಲ್ಲ ಹುಲಿಗಳೂ ಹೌಹೌದು ಮನುಷ್ಯ ಶ್ರೇಷ್ಠನಾಗಲಾರ. ನಾವೇ ಅವನಿಗಿಂತ ಉತ್ತಮ, ನಮ್ಮಂತೆಯೇ ಹಾವು, ಕತ್ತೆ, ಹಂದಿಗಳೂ ಉತ್ತಮವೇ. ಏಕೆಂದರೆ ಅವೂ ಕೂಡ ಬೀಡಿ, ಸಿಗರೇಟು, ಮದ್ಯಪಾನ ಮಾಡುವುದಿಲ್ಲ. ಹೀಗಿರುವಾಗ ಮನುಷ್ಯ ಶ್ರೇಷ್ಠನೆಂಬುದು ಸುಳ್ಳು ಎಂದು ಠರಾವು ನಿರ್ಣಯ ಮಾಡಿದುವು.

ಜಗತ್ತಿನಲ್ಲಿರುವ ಎಲ್ಲ ದುಶ್ಚಟಗಳ ಭಂಡಾರವಾಗಿದ್ದಾನೆ ಮನುಷ್ಯ. ಹುಲಿಯಾಗಲಿ, ಹಾವಾಗಲಿ ವಿನಾಕಾರಣವಾಗಿ ಇನ್ನೊಬ್ಬರಿಗೆ ತೊಂದರೆ ಕೊಡಲಾರವು. ಆದರೆ ಮನುಷ್ಯ ಹಾಗಲ್ಲ. ದುಶ್ಚಟಗಳಿಂದ ತಾನೂ ಹಾಳಾಗುತ್ತಾನೆ, ಇತರರನ್ನೂ ತೊಂದರೆಗೊಳಪಡಿಸುತ್ತಾನೆ. 'ಧೂಮಪಾನ ಮಾಡಬೇಡಿ' ಎಂದು ರೈಲು, ಬಸ್ಸು, ಚಿತ್ರ ಮಂದಿರ, ದೇವಾಲಯಗಳ ಆವರಣಗಳಲ್ಲಿ ಸೂಚನಾಫಲಕಗಳನ್ನು ಹಾಕಿರುತ್ತಾರೆ. ಆದರೆ, ಅವನ್ನು ನೋಡಿಯೂ ನೋಡದವನಂತೆ ಧೂಮಪಾನ ಮಾಡಿಯೇ ಬಿಡುತ್ತಾನೆ. ತನ್ನ ದುಶ್ಚಟದಿಂದ ಇತರರಿಗೆ ಹಾನಿ, ಪವಿತ್ರಸ್ಥಳಗಳಿಗೆ ಅಪಚಾರವಾಗುತ್ತದೆ ಎಂಬುದನ್ನು ಪರಿಗಣನೆಗೆ ತರುವುದೇ ಇಲ್ಲ.

ದುಶ್ಚಟಗಳು ಹೇಗೆಂದರೆ ಪ್ರಾರಂಭದಲ್ಲಿ ಪ್ರಿಯ, ಅಂತ್ಯದಲ್ಲಿ ಆಪತ್ತು ತರುವ ಕೆಡಕುಗಳು. ಅಂಗುಲಂಗುಲವಾಗಿ ಸಾವನ್ನು ಹತ್ತಿರಕ್ಕೆ ಕರೆತರುವ ದುರಭ್ಯಾಸಗಳು.

(೨೯-೪-೨೦೦೨ರಂದು ಬೆಂಗಳೂರು ಟಿ. ದಾರಹಳ್ಳಿಯಲ್ಲಿ ನಡೆದ ಬಸವ ಜಯಂತಿ ಸಮಾರಂಭದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ)

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಅರಳೆ ಎಲೆಯ ಮೇಯ ಬಂದ ಎರಳೆ*
*ಹಾರಿ ಬಿದ್ದುದ ಕಂಡೆನಯ್ಯಾ*
*ಅರಳೆ ಎಲೆಯ ಹರಿಯಲು*
*ಎರಳೆ ಎದ್ದೋಡಿತ್ತು ನೋಡಾ*
*ಓಡಿ ಹೋದ ಎರಳೆ ಅಡಗಿದ ತಾವ ಬಲ್ಲರೆ*
*ಪ್ರಾಣಲಿಂಗ ಸಂಬಂಧಿಗಳೆಂಬೆ ಕಾಣಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.*

ದೇಹ ಇಂದ್ರಿಯ ವಿಷಯವೆಂಬ ಅರಳಿ ಎಲೆಯನ್ನು ತಿನ್ನಲು ಬಂದ ಜೀವನೆಂಬ ಜಿಂಕೆಯು, ಅಹಂಕಾರ ಮಮಕಾರಗಳಿಂದ ನೆಗೆದಾಡಿ, ಅಹಂಕಾರಮಮಕಾರಗಳ ಭೇದದ ಬಾವಿಯಲ್ಲಿ ನಾಶವಾದದನು ಜ್ಞಾನದ ಕಣ್ಣಿನಿಂದ ನೋಡಿದ ಶಿವಶರಣನು ಇಂದ್ರಿಯಗಳ ವ್ಯಾಪಾರವನ್ನು ಲಿಂಗ ಸಂಬಂಧದಿಂದ ನಿವೃತ್ತಿ ಮಾಡಿದುದರಿಂದ ಜೀವನ ಜೀವಭಾವ ತೊಲಗಿಹೋಯಿತು. ಆ ಜೀವನ ಜೀವಭಾವವು ಮಂತ್ರಲಿಂಗ ಸಂಬಂಧದಿಂದ ದೂರಾಗಿ, ಸಜ್ಜೀವ ಸ್ವರೂಪವಾಗಿ, ಪ್ರಾಣಲಿಂಗದಲ್ಲಿ ಒಂದಾಯಿತೆಂಬುದನ್ನು ತಿಳಿದಾತನೆ ಪ್ರಾಣಲಿಂಗಿ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

**ಶ್ರೀವಾಣಿ**

*ಇಂದಿನ ಜಗತ್ತಿನ ಜನಾಂಗದಲ್ಲಿ ತತ್ವನಿಷ್ಠೆ, ಧಾರ್ಮಿಕ ಸಂಸ್ಕೃತಿ ಉಳಿಯಬೇಕಾದರೆ ಮಠಗಳು ಜ್ಞಾನದಾಸೋಹ, ವಿದ್ಯಾದಾಸೋಹ, ಪ್ರಸಾದ ದಾಸೋಹದ ನಿಲಯಗಳಾಗಬೇಕು.*

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಭಾಪುರೆದಾಸೋಹಿ ಭಾಪುಕಾಯಕ ಸೂರ್ಯ
''ಭಾಪು ನಿನ್ನೆಸರು ಅಮರಾತು'' । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ಎನ್ನ ಒಳಗೊತ್ತಿನೋಡು'' ಪ್ರಭುಲಿಂಗ ಜಂಗಮ
ಎನ್ನಲೇನುಂಟಯ್ಯ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಾಲಲದ್ದು ಗುರುವೆ ನೀರಲ್ಲದ್ದು ಪ್ರಭುವೆ
ನೀನೆ ಗತಿಯೆನಗೆ ಮತಿಯೆನಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರಮ ಶಿವಯೋಗಿಯೆ ಪರಿಪೂರ್ಣಯೋಗಿಯೆ
ಶುದ್ಧ ಸಾತ್ವಿಕಯೋಗಿ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾಯಾಹರಯೋಗಿಯೆ ಮಾಯಮರ್ದನಯೋಗಿ
ಮಾಯಾಮದಮಥನ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿರ್ವಾಣಯೋಗಿಯೆ ನಿರ್ಮಲಯೋಗಿಯೆ
ಸಕಲ ನಿಷ್ಕಲ ತತ್ವ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸುಜ್ಞಾನಯೋಗಿಯೆ ಸುಚರಿತ ಯೋಗಿಯೆ
ದಾಸೋಹ ಶಿವಮಣಿಹ ಶಿವಯೋಗಿ. । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಜವರಿತು ಬೆರೆಸಿದ ನಿಜವಗಲಿ ಚಣವಿರದ
ನಿಜಶರಣರ ಸುಳಿವರಿದ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಯೋಗದ ಹೊಲಬರಿದ ಯೋಗಕರ್ಥವ ಬರೆದ
ಯೋಗ ಕಾಯಕವೆಂದ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವಶಕ್ತಿ ಸಂಪುಟನೆ ಶಿವರಕ್ತಿಪೂರ್ಣನೆ
ಲಯವಿಲ್ಲದ ಭವನೆ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ಶರಣರ ಶೂನ್ಯತತ್ತ್ವ

– ಲಿಂ. ಡಾ. ಎಚ್. ತಿಪ್ಪೇರುದ್ರಸ್ವಾಮಿ
ಪ್ರಸಿದ್ಧ ವಿದ್ವಾಂಸರು

ಬಸವಣ್ಣನವರು ಅನುಭವಮಂಟಪದಲ್ಲಿ ಅಲ್ಲಮಪ್ರಭುವಿಗಾಗಿ ನಿರ್ಮಿಸಿದ ಪೀಠವನ್ನು 'ಶೂನ್ಯಸಿಂಹಾಸನ' ಎಂದು ಕರೆದರು. ೧೫ನೇ ಶತಮಾನದಲ್ಲಿ ರೂಪಿತವಾದ ವಚನಸಂಕಲನಗ್ರಂಥ 'ಶೂನ್ಯಸಂಪಾದನೆ' ಎಂಬ ಹೆಸರನ್ನು ಪಡೆಯಿತು. ಈ ಹೆಸರುಗಳೇ ಆಶ್ಚರ್ಯಕರವಾದವು. ಅಗೆದೆಷ್ಟೊ ಅರ್ಥವನ್ನು ಕೊಡುವ ಧ್ವನಿಸಮನ್ವಿತವಾದ ಕಾವ್ಯದಂತಿದೆ ಈ ಪದಸಮುಚ್ಚಯ. 'ಶೂನ್ಯ' ಎನ್ನುವ ಮಾತಿಗೆ ಶರಣರು ಕೊಟ್ಟಿರುವ ಅರ್ಥವ್ಯಾಪ್ತಿಯನ್ನು ಗಮನಿಸಿದಾಗ ಈ ಧ್ವನಿ ಅನುರಣಿತವಾಗುತ್ತದೆ. ಶರಣ ತಾತ್ವಿಕ ವಿವೇಚನೆಯಿಂದ ಮತ್ತು ಅನುಭಾವದ ನಿಲುವಿನಿಂದ ಈ ಮಾತು ವಿಶಿಷ್ಟವಾದ ಅರ್ಥವ್ಯಾಪ್ತಿಯನ್ನೂ ಕಾಂತಿಯನ್ನೂ ಪಡೆದಿದೆ.

'ಶೂನ್ಯ' ಎನ್ನುವ ಮಾತು ಭಾರತೀಯ ತತ್ತ್ವಶಾಸ್ತ್ರದಲ್ಲಿ ಬಹಳ ಹಳೆಯದು. ಬೌದ್ಧಧರ್ಮದಲ್ಲಿ 'ಶೂನ್ಯವಾದ' ಎಂಬ ಒಂದು ಶಾಖೆಯೇ ಬೆಳೆದುಬಂದಿತ್ತು. ಈ ಧರ್ಮದ ಒಂದು ಪ್ರಮುಖವಾದ ಘಟ್ಟ ಮಾಧ್ಯಮಿಕ ಮತ. ನಾಗಾರ್ಜುನ ಆರ್ಯದೇವ ಮೊದಲಾದವರಿಂದ ಪ್ರತಿಪಾದಿತವಾಗಿ ಇದು ಒಂದು ಸುಪುಷ್ಟವಾದ ಮಧ್ಯಮ ಮಾರ್ಗವನ್ನು ಬೌದ್ಧಧರ್ಮಕ್ಕೆ ಹಾಕಿಕೊಟ್ಟಿತು. ಬೌದ್ಧಧರ್ಮದ ಇತರ ಶಾಖೆಗಳಂತೆ ಇದು ''ಅನಾತ್ಮ''ವಾದವನ್ನೇ ಅವಲಂಬಿಸಿದರೂ 'ಶೂನ್ಯ'ದ ಪ್ರತಿಪಾದನೆಯಲ್ಲಿ ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡಿದೆ; 'ಅನಾತ್ಮವಾದ'ವನ್ನು ಕುರಿತು ಎತ್ತಬಹುದಾದ ಸಂದೇಹಗಳಿಗೆಲ್ಲಾ ಉತ್ತರವನ್ನು ಕೊಟ್ಟಿದೆ.

ಬುದ್ಧ ಆತ್ಮವೆಂಬುದು ಒಪ್ಪಿಕೊಳ್ಳಲಿಲ್ಲವೇ ಹೊರತು ದೇಹವನ್ನಾಳುತ್ತಿರುವ ಧರ್ಮಸಂಕೇತದ ಶಕ್ತಿಯನ್ನು ತಿರಸ್ಕರಿಸಲಿಲ್ಲ. ದೇಹದಲ್ಲಿರುವ ಭೌತಿಕ ವ್ಯವಸ್ಥೆಗಳಿಗೆ ಹಿನ್ನೆಲೆಯಾಗಿ ಮನಸ್ಸಿನ ನಿರಂತರ ಧಾರೆ (ಮೈಂಡ್ ಕಂಟಿನ್ಯೂಯಿಸಂ)ಯೊಂದು ಅದನ್ನಾಳುವ ನಿಯಾಮಕ ಶಕ್ತಿಯಾಗಿ ನಿಂತಿದೆ. ಈ ಶಕ್ತಿಯೇ ಜೀವನದ ನಿರಂತರತೆಗೂ ಪ್ರಗತಿಗೂ ಕಾರಣ. ಇಂದಿನ ಜೀವನದ ಮಾನಸಿಕ ವ್ಯವಸ್ಥೆ ಮುಂದಿನ ಜೀವನದ ಈ ವ್ಯವಸ್ಥೆಗೆ ಕಾರಣವಾಗುತ್ತದೆ. ಮತ್ತು ಅದು ಹಿಂದಿನ ವ್ಯವಸ್ಥೆಯನ್ನು ಅವಲಂಬಿಸಿದೆ. ಈ ತತ್ತ್ವವು ಆತ್ಮವಾದಕ್ಕೂ ಭೌತವಾದಕ್ಕೂ ಒಳಗಾಗದೆ ತಾನೇ ಸ್ವತಂತ್ರ್ಯವಾಗಿ ನಿಂತಿತು. ಇಲ್ಲಿ ಪುನರ್ಜನ್ಮವೆಂದರೆ 'ಆತ್ಮ' ಈ ದೇಹವನ್ನು ಬಿಟ್ಟು ಇನ್ನೊಂದು ಕಡೆ ಹೋಗಿ ಜನಿಸುತ್ತದೆ ಎಂದಲ್ಲ; ಈ ದೇಹದಲ್ಲಿರುವ ಮನಸ್ಸಿನ ನಿರಂತರ ನಿಯಾಮಶಕ್ತಿ ಈ ವ್ಯವಸ್ಥೆಯಿಂದ ಬೇರಾಗಿ ಇದರ ಆಧಾರದ ಮೇಲೆ ರೂಪಿತವಾದ ಇನ್ನೊಂದು ವ್ಯವಸ್ಥೆಗೆ ಒಳಪಡುತ್ತದೆನ್ನುವುದೇ ಇಲ್ಲಿ ಪುನರ್ಜನ್ಮವೆಂಬುದಕ್ಕೆ ಅರ್ಥ.

ಈ ವ್ಯವಸ್ಥೆಗೆ ಅತೀತವಾಗುವುದೇ 'ನಿರ್ವಾಣ'. ಶೂನ್ಯವಾದ, ಇದನ್ನು ಎಲ್ಲಾ ಸಂಸ್ಕಾರಗಳ ನಿರ್ಮೂಲನವೆಂದು ಕರೆಯುತ್ತದೆ. ನಮಗೂ ಸೃಷ್ಟಿಗೂ ಇರುವ ಸಂಬಂಧವನ್ನು ಕುರಿತು ಆಲೋಚಿಸುವ ಭಾವನೆಗಳೆಲ್ಲವೂ ಈ ಸಂಸ್ಕಾರದಲ್ಲಿ ಸೇರುತ್ತವೆ. ಇವಲ್ಲದೆ ಆಶೆ ಮೋಹ ದ್ವೇಷಾದಿಗುಣಗಳು, ಭೌತಿಕದೇಹದಲ್ಲಿರುವ ಗ್ರಹಣಶಕ್ತಿ ಸಂವೇದನೆ, ಮಾನಸಿಕ ಕ್ರಿಯೆಗಳು ಮತ್ತು ಪ್ರಜ್ಞೆ – ಇವೆಲ್ಲವೂ ಸಂಪೂರ್ಣವಾಗಿ ನಿರ್ಮೂಲವಾಗುತ್ತವೆ ನಿರ್ವಾಣದಲ್ಲಿ, ಇಲ್ಲಿ ''ಉಪಾಧಿಶೇಷ ನಿರ್ವಾಣ'' ಮತ್ತು ''ನಿರುಪಾಧಿಶೇಷ ನಿರ್ವಾಣ'' ಅಥವಾ 'ಪರಿನಿರ್ವಾಣ' – ಎಂದು ಎರಡು ಬಗೆಯನ್ನು ಮಾಡುವುದುಂಟು. ದೇಹ ಮನಸ್ಸುಗಳು ತಮ್ಮ ಕರ್ತವ್ಯವನ್ನು ಮಾಡುತ್ತಿದ್ದರೂ ಆಶೆ ದ್ವೇಷ ಮೋಹಾದಿಗಳನ್ನು ಬಿಟ್ಟು ಪ್ರಶಾಂತ ಮನಸ್ಸಿನಿಂದ ಕೂಡಿರುವುದು 'ಉಪಾಧಿಶೇಷ ನಿರ್ವಾಣ'. 'ಪರಿನಿರ್ವಾಣ'ದಲ್ಲಿ ದೇಹ ಮನಗಳಿಂದ ಹಿಡಿದು ಎಲ್ಲವೂ ಸಂಪೂರ್ಣವಾಗಿ ಇಲ್ಲದಂತಾಗುತ್ತವೆ, ಶೂನ್ಯದಲ್ಲಿ ಕೊನೆಗೊಳ್ಳುತ್ತವೆ.

ಈ ನಿರ್ವಾಣದ ಪೂರ್ಣಕಲ್ಪನೆಯನ್ನು ಅರಿಯ ಬೇಕಾದರೆ 'ಶೂನ್ಯ' ಎಂಬುದರ ಅರ್ಥವನ್ನೂ ಬೌದ್ಧರ ಶೂನ್ಯವಾದದ ತಿರುಳನ್ನೂ ಈ ಹಿನ್ನೆಲೆಯಲ್ಲಿ ನೋಡಬೇಕಾಗುತ್ತದೆ. ಶೂನ್ಯವಾದಿಗಳ ಪ್ರಕಾರ ಈ ಸೃಷ್ಟಿಯಲ್ಲಿ ಸತ್ಯವಾದುದು ಯಾವುದೂ ಇಲ್ಲ. ಏಕೆಂದರೆ ಯಾವ ವಸ್ತುಗಳೂ ತಮ್ಮಲ್ಲಿ ಸಹಜವಾಗಿ ಅಂತರ್ಗತವಾದ ಮತ್ತು ಸ್ವತಂತ್ರವಾದ ಸ್ವಭಾವಗಳನ್ನು ಪಡೆದಿಲ್ಲ. ನಮಗೆ ಗೋಚರವಾಗುವ ಪ್ರತಿಯೊಂದು ವಸ್ತುವೂ ತನ್ನ ಆ ರೀತಿಯ ಅಸ್ತಿತ್ವಕ್ಕೆ ಇನ್ನೊಂದು ಕಾರಣವನ್ನೂ ನಿಯಮವನ್ನೂ ಅವಲಂಬಿಸಿರುತ್ತದೆ. ಆದುದರಿಂದ ಯಾವ ವಸ್ತುವೇ ಆಗಲಿ ತನ್ನ ಸಹಜಸ್ವರೂಪದಿಂದ ಅಸ್ತಿತ್ವದಲ್ಲಿದೆಯೆಂದು ಹೇಳುವುದಕ್ಕಾಗುವುದಿಲ್ಲ. ನಾವು ಒಂದು ವಸ್ತುವನ್ನು ನೋಡುವಾಗ ಆ ವಸ್ತುವಿನ 'ಆರೋಪಿತ ರೂಪ'ವನ್ನು ನೋಡುತ್ತೇವೆಯೇ ಹೊರತು 'ಸ್ವರೂಪ'ವನ್ನಲ್ಲ.

ಹಾಗಾದರೆ ಸತ್ಯದ 'ಸ್ವ' ರೂಪವೇನು? 'ಸ್ವ' ಭಾವವೇನು? ಒಂದು ವಸ್ತುವಿನ ಸಹಜವಾದ ಸ್ವಭಾವವೆಂದರೆ ಅದು ಇನ್ನೊಂದರ ಅಪೇಕ್ಷೆ ಇಲ್ಲದೆ ತನ್ನಲ್ಲಿಯೇ ಅಂತರ್ಗತವಾಗಿರುವ ಗುಣಗಳಿಂದ ಸ್ವತಂತ್ರವಾಗಿರುವುದು. ಇದನ್ನು 'ಪರನಿರಪೇಕ್ಷಾ' ಎಂದು

ಕರೆದಿದ್ದಾರೆ. ಈ ದೃಷ್ಟಿಯಿಂದ ನೋಡಿ ಶೂನ್ಯವಾದದ ಪ್ರತಿಪಾದಕರು ಈ ಜಗತ್ತಿನ ಅಸ್ತಿತ್ವವನ್ನೇ ಸಂಪೂರ್ಣವಾಗಿ ನಿರಾಕರಿಸಿದ್ದಾರೆ. ಈ ಜಗತ್ತಿನಲ್ಲಿ ಕಾಣುವ ವಸ್ತುಗಳೆಲ್ಲವೂ ಆರೋಪಿತವಾದವುಗಳೇ ಹೊರತು ಸಹಜಸ್ವಭಾವದಿಂದ ಕೂಡಿದವುಗಳಲ್ಲ. ಆದುದರಿಂದ ಇವೆಲ್ಲಾ ಗಂಧರ್ವನಗರದಂತೆ ಕಲ್ಪಿತವಾದವುಗಳು. ಈ ಸೃಷ್ಟಿ ಮಿಥ್ಯವಾದುದು. 'ನಾನು', 'ನನ್ನದು' ಎಂಬ ಭಾವನೆಗಳೂ ಸುಳ್ಳು. ಈ ಭಾವನೆಯಲ್ಲಿ ಆಳವಾಗಿ ಬೇರುಬಿಟ್ಟಿರುವ ಸಂಸಾರದ ಬಂಧನಗಳೂ ಇದನ್ನು ಅರಿತೊಡನೆಯೇ ನಾಶವಾಗುತ್ತವೆ – ಹೀಗೆ ಶೂನ್ಯವಾದದ ಮೂಲಭೂತವಾದ ಅಂಶ, ಈ ಜಗತ್ತನ್ನು ನಾನು ಎಂಬುದನ್ನು ಅಳಿಸಿಹಾಕುವುದು: ಅಂದರೆ 'ಆತ್ಮ' ಮತ್ತು ಅದಕ್ಕೆ ಸಂಬಂಧಿಸಿದ ತತ್ತ್ವಗಳನ್ನು ಇಲ್ಲಗೈಯುವುದೇ ಆಗಿದೆ.

**ಹೀ**ಗೆ ಮಾಧ್ಯಮಿಕರು ತೋರಿಕೆಯ ವಸ್ತುಗಳೆಲ್ಲವನ್ನೂ ಸುಳ್ಳೆಂದು ತಿರಸ್ಕರಿಸಿ ತಾವು ಕಂಡ ಅಖಂಡ (ಅಬ್ಸಲ್ಯೂಟ್) ವಸ್ತುವಿನ ಸ್ವರೂಪವನ್ನು 'ಶೂನ್ಯ' ಎಂದು ನಿರ್ದೇಶಿಸಿದರು. ಅವರ ಆ ಅಭಿಪ್ರಾಯವನ್ನು ಹೀಗೆ ಸಂಗ್ರಹಿಸಬಹುದು. ಅನೇಕ ಅಭಿಪ್ರಾಯಗಳೂ ಆಲೋಚನೆಗಳೂ ತತ್ತ್ವಸಿದ್ಧಾಂತಗಳೂ ನಮ್ಮ ಮನಸ್ಸನ್ನು ಆಕ್ರಮಿಸಿವೆ. ಅವುಗಳ ಒತ್ತಡವನ್ನು ತೆಗೆದುಹಾಕಿದಾಗ ಮಾತ್ರ ಶೂನ್ಯತೆಯ ಅರಿವು ನಮಗಾಗುತ್ತದೆ. ನಮ್ಮ ಆಲೋಚನೆಗಳ ಮಿತಿಗೆ ನಾವು ಒಳಗಾಗಿ ಒಂದು ಪೂರ್ವಕಲ್ಪಿತ ಭಾವನೆಯಿಂದ ಸತ್ಯವನ್ನರಿಯಲು ಪ್ರಯತ್ನಿಸುತ್ತೇವೆ. ಆಗ ಸತ್ಯದ ಸಹಜ ಸ್ವರೂಪ ತಿಳಿಯುವುದಿಲ್ಲ. ಈ ಎಲ್ಲ ಆವರಣಗಳನ್ನೂ ತೆಗೆದುಹಾಕಿ, ಎಲ್ಲ ಆರೋಪಿತ ಗುಣಗಳನ್ನೂ ತಿರಸ್ಕರಿಸಿ ನೋಡಿದಾಗ ಶೂನ್ಯತೆಯ ಅನುಭವವಾಗುತ್ತದೆ – ಎನ್ನುತ್ತದೆ ಶೂನ್ಯವಾದ.

**ಇ**ದು ನಿಷೇಧಾತ್ಮಕ ಮಾರ್ಗದಿಂದ ಸತ್ಯವನ್ನು ಕಾಣುವ ಪ್ರಯತ್ನವೆಂಬಂತೆ ತೋರುತ್ತದೆ. ಆದರೆ ಇದರ ಪ್ರತಿಪಾದಕರಲ್ಲಿ ಪ್ರಮುಖನಾದ ನಾಗಾರ್ಜುನ, ಇದು ನಿಷೇಧಾತ್ಮಕವಲ್ಲವೆಂದು ತೋರಿಸಲು ಪ್ರಯತ್ನಪಡುತ್ತಾನೆ. ವಿಧಿ, ನಿಷೇಧಗಳು ಸತ್ಯವನ್ನು ಕಾಣಲು ನಾವು ನಿರ್ಮಿಸಿಕೊಂಡಿರುವ ಕೃತಕವಾದ ಪರಿಮಿತವಲಯಗಳು. ಇವುಗಳನ್ನು ತೆಗೆದುಹಾಕಿದಾಗ ಮಾತ್ರ ಸತ್ಯವನ್ನು ಕಾಣಲು ಸಾಧ್ಯವಾಗುತ್ತದೆ. ಅಂದರೆ ಇಲ್ಲಿ ಶೂನ್ಯ ಎಂಬುದು ಎಲ್ಲ ತತ್ತ್ವಗಳನ್ನೂ ನಿಷೇಧಿಸಿ ಆ ನಿಷೇಧವನ್ನೂ ಮೀರಿನಿಂತ ಸತ್ಯವೆಂಬ ಅರ್ಥವನ್ನು ಕೊಡುತ್ತದೆ.

**ಈ** ನಿರ್ವಾಣದ ಸ್ವರೂಪ ಅನಿರ್ವಚನೀಯವೆಂದು ಬುದ್ಧ ಹೇಳಿದ್ದಾನೆಯೇ ಹೊರತು ಇದರ ಅಸ್ತಿತ್ವವನ್ನೇ ಅಲ್ಲಗಳೆದಿಲ್ಲ. ಇದರ ಇರುವಿಕೆ ಬೆಂಕಿಯ ಅಸ್ತಿತ್ವದಂತೆ ಎಂದು ಉದಾಹರಣೆ ಕೊಡಲಾಗಿದೆ. ಯಾವುದೇ ಒಂದು ಸ್ಥಳವನ್ನು ಆಕ್ರಮಿಸಿ ಕೊಳ್ಳದಹಾಗೆ ಬೆಂಕಿ ಅದರ ಮೂಲರೂಪದಲ್ಲಿ ಸುಪ್ತವಾಗಿರುತ್ತದೆ, ಉಜ್ಜಿದಾಗ ಅಲ್ಲಿಯೇ ಉದ್ಭವವಾಗುತ್ತದೆ, ಮತ್ತೆ ಹಾಗೇ ಅಡಗುತ್ತದೆ. ನಿರ್ವಾಣದ ಸ್ಥಿತಿ ಅಂತಹದು. ಸಹಜವಾಗಿರುವ ಸತ್ಯದ ಜ್ಞಾನವನ್ನು ಗ್ರಹಿಸುವುದೇ ನಿರ್ವಾಣ. ಇದಕ್ಕೆ ಮುಖ್ಯವಾಗಿ ನಮ್ಮ ಮನಸ್ಸಿನ ಕ್ರಿಯೆಯಲ್ಲಿ ಪರಿತರ್ವನೆಯಾಗಬೇಕಾಗುತ್ತದೆ. ಆ ಪರಿವರ್ತನೆಯಿಂದ ನಮ್ಮ ನಿಜಸ್ಥಿತಿಯನ್ನು ಅರಿಯುವುದು ಸಾಧ್ಯವಾಗುತ್ತದೆ. ಅಂದರೆ 'ಶೂನ್ಯ' ವೆನ್ನುವುದು ಜಗತ್ತನ್ನು ನೋಡುವ ನಮ್ಮ ಮನಸ್ಥಿತಿಯಲ್ಲಾಗುವ ಬದಲಾವಣೆ.

**ಮಾ**ಧ್ಯಮಿಕರ ಈ ಶೂನ್ಯವಾದದ ಪ್ರಭಾವ ವೇದಾಂತದ ಮೇಲೆ, ಅದರಲ್ಲೂ ಮುಖ್ಯವಾಗಿ ಶಂಕರರ ಅದ್ವೈತದ ಮೇಲೆ, ವಿಶೇಷವಾಗಿ ಆಗಿದೆಯೆಂದು ಹೇಳುವುದುಂಟು. ಶಂಕರಾಚಾರ್ಯರಿಗಿಂತ ಪೂರ್ವದ ವೇದಾಂತದಲ್ಲಿ ಮುಖ್ಯವಾಗಿ ಏಕತ್ವವಾದ (ಮಾನಿಸಂ) ಗೋಚರವಾಗುತ್ತದೆ. ಆದರೆ ಅದು ಶಂಕರರಲ್ಲಿ ಶೂನ್ಯವಾದದ ಪ್ರಭಾವವನ್ನುಳ್ಳ ಅದ್ವೈತಮಾರ್ಗವನ್ನು ಹಿಡಿದುದು ಹೇಗೆ? ಶೂನ್ಯವಾಗದಂತೆ ಇವರೂ ಸೃಷ್ಟಿಯೆಲ್ಲಾ ಮಿಥ್ಯೆಯೆಂದು ಹೇಳಿದರು: ಮತ್ತು ಜೀವ ಬ್ರಹ್ಮರ ದ್ವೈತವನ್ನು ನಿಷೇಧಿಸುವುದರ ಮೂಲಕ ಬ್ರಹ್ಮದ ಸ್ವರೂಪವನ್ನು ಸ್ಥಾಪಿಸಲು ಯತ್ನಿಸಿದರು. ಇದ್ದಕ್ಕಿದ್ದಂತೆಯೇ ವೇದಾಂತ ಈ ದಿಕ್ಕಿಗೆ ತಿರುಗಲು ಕಾರಣವೇನು? ಇದಕ್ಕೆ ಎರಡು ಕಾರಣಗಳನ್ನು ಕೊಡಬಹುದಾಗಿದೆ. ಒಂದು, ಈ ಭಾವನೆ ಬೆಳೆಯುವುದಕ್ಕೆ ಉಪನಿಷತ್ತಿನ ಹೇಳಿಕೆಗಳಲ್ಲಿಯೇ ಸಾಕಷ್ಟು ಅವಕಾಶವಿತ್ತು; ಅದು ಶಂಕರರಲ್ಲಿ ಪ್ರಕಟಗೊಂಡಿತು. ಇನ್ನೊಂದು ಕಾರಣ, ಮಾಧ್ಯಮಿಕರ ಶೂನ್ಯವಾದದ ಪ್ರಭಾವವೂ ಶಂಕರರ ಮೇಲಾಗಿದೆ ಎನ್ನುವುದು. ಮೊದಲನೆಯ ಕಾರಣವು ನಿಜವಿರಬಹುದಾದರೂ ಎರಡನೆಯದನ್ನು ತಳ್ಳಿಹಾಕುವಂತಿಲ್ಲ. ಶೂನ್ಯವಾದ ತನ್ನ ಪ್ರಭಾವವನ್ನು ಅದ್ವೈತದ ಮೇಲೆ ಬೀರಿದೆ ಎನ್ನುವುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

**ಶೂ**ನ್ಯವಾದದ ಕೆಲವು ಅಂಶಗಳಿಂದ ಶಂಕರರು ಪ್ರಭಾವಿತರಾಗಿರಬಹುದಾದರೂ ಅವರ ಅದ್ವೈತ ಸಿದ್ಧಾಂತ ಬೌದ್ಧರ ಅನಾತ್ಮವಾದಕ್ಕೆ ದೊಡ್ಡ ಏಟನ್ನೇ ಕೊಟ್ಟಿತು. ಅವರ ಪ್ರಚಂಡ ತರ್ಕಶಕ್ತಿ ಬೌದ್ಧಧರ್ಮದ ಬೇರನ್ನೇ ಹಿಡಿದು ಅಲುಗಾಡಿಸಿತು. ಆತ್ಮವನ್ನು ತಿರಸ್ಕರಿಸಿ ಸತ್ಯದ ಸ್ವರೂಪವನ್ನು 'ಶೂನ್ಯ'ವೆಂದು ಪ್ರತಿಪಾದಿಸಿದ ಮಾಧ್ಯಮಿಕವಾದಕ್ಕೆ ಸಾಕಷ್ಟು ತಾತ್ವಿಕವಾದ ತಳಹದಿ ಇರಲಿಲ್ಲ. ಶೂನ್ಯವೆಂಬುದು ನಿಷೇಧವಲ್ಲವೆಂದೂ, ಅದು ಎಲ್ಲ ಆರೋಪಿತಗಳನ್ನೂ ಕಳೆದು ಉಳಿಯುವ ಸಹಜಸ್ಥಿತಿಯೆಂದೂ ಹೇಳುವುದಕ್ಕೆ ಎಷ್ಟೇ ಪ್ರಯತ್ನಪಟ್ಟರೂ ಅದು ನಿಷೇಧಾರ್ಥದಲ್ಲಿಯೇ ಕೊನೆಗೊಂಡಿತು. ಏಕೆಂದರೆ ವಿಧಾಯಕವಾದ ಯಾವ ಕಲ್ಪನೆಯನ್ನೂ ಮಾಧ್ಯಮಿಕರು ಶೂನ್ಯತತ್ವಕ್ಕೆ ಕೊಡಲಿಲ್ಲ. ಸೃಷ್ಟಿ ಸುಳ್ಳು, ದೇಹ ಮಿಥ್ಯೆ, ಈ ತೋರಿಕೆಯ ವಸ್ತುಗಳೆಲ್ಲಾ ಈ ರೂಪದಲ್ಲಿಲ್ಲ ಎಂದು ಮುಂತಾಗಿ 'ಇದಲ್ಲ ಇದಲ್ಲ' ಎನ್ನುತ್ತಾ ಹೊರಟು ಅಷ್ಟಕ್ಕೇ ನಿಂತುಬಿಟ್ಟರು. ವೇದಾಂತದಲ್ಲಿಯೂ 'ನೇತಿ ನೇತಿ' ಎಂಬ ನಿಷೇಧಮಾರ್ಗವನ್ನು ಕಾಣುತ್ತೇವೆ. ಆದರೆ ಅದು ಅಷ್ಟಕ್ಕೇ ನಿಲ್ಲದೆ 'ಇದು' ಎಂದು ವಿಧಾಯಕಸ್ವರೂಪದ ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಡುತ್ತದೆ. ಶೂನ್ಯವಾದಕ್ಕೂ ವೇದಾಂತಕ್ಕೂ ಇರುವ ವ್ಯತ್ಯಾಸ ಇದೇ. ಶೂನ್ಯವಾದ ಎಲ್ಲಿಗೋ ನಮ್ಮನ್ನು ಕರೆದೊಯ್ದು ಮಧ್ಯದಲ್ಲಿ ಕೈಬಿಟ್ಟು ಹೋದಂತೆ







ಅಲ್ಲಮಪ್ರಭು

ಭಾಸವಾಗುತ್ತದೆ. ಆದರೆ ವೇದಾಂತ ಮೇಲಕ್ಕೆ ನಮ್ಮನ್ನು ಕರೆದೊಯ್ದು ಅಲ್ಲಿ ಕೈಬಿಡದೆ ನಮ್ಮ ಕಣ್ಣ ಮುಂದೆ ಉಜ್ವಲವಾದ ಬೆಳಕನ್ನು ಬೀರುತ್ತದೆ; ಇನ್ನೂ ಮೇಲೆರುವುದಕ್ಕೆ ಪ್ರಚೋದನೆಯನ್ನೂ ಶಕ್ತಿಯನ್ನೂ ಕೊಡುತ್ತದೆ.

**ಪ**ರಿಪೂರ್ಣ ಸ್ವರೂಪವಾದ ಬ್ರಹ್ಮಶಕ್ತಿಯೇ ಜೀವನದ ಈ ನಿರಂತರತೆಗೆ ಕಾರಣ. ಆ ವಿಶ್ವಾತ್ಮಶಕ್ತಿ, ಸರ್ವಭೂತಗಳಲ್ಲಿಯೂ ಆತ್ಮಶಕ್ತಿಯಾಗಿ ನೆಲೆಸಿ ವಸ್ತುಗಳ ಒಳಗೂ ಹೊರಗೂ ಅನೇಕ ರೂಪಗಳಿಂದ ವ್ಯಾಪಿಸಿದೆ – ಎಂದು ಉಪನಿಷತ್ತುಗಳು ಹೇಳುತ್ತವೆ. ತಾನು ಅವಲಂಬಿಸಿದ ವಸ್ತುಗಳಿಂದ ಅಗ್ನಿಯ ರೂಪ ಬೇರೆಬೇರೆಯಾದಂತೆ ಕಾಣಬಹುದಾದರೂ ಮೂಲತಃ ಅದು ಒಂದೇ. ಹಾಗೆಯೇ ಈ ಪರಬ್ರಹ್ಮಶಕ್ತಿ ತೋರಿಕೆಯ ಅನೇಕ ರೂಪಗಳನ್ನು ಅವಲಂಬಿಸಿದ್ದರೂ ಮೂಲತಃ ಅದರ ಸ್ವರೂಪ ಒಂದೇ. ಅದರ ಪೂರ್ಣತೆಗೆ ಚ್ಯುತಿಯಿಲ್ಲ.

*ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯುತೇ,*
*ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ*

ಎಂಬ ಈಶಾವ್ಯಾಸದ ಶಾಂತಿಮಂತ್ರವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಅಪಾರವಾದ ಅರ್ಥವನ್ನು ಒಳಗೊಂಡಿರುವ ಈ ಶ್ಲೋಕ, ಸೃಷ್ಟಿಯ ಮತ್ತು ಸೃಷ್ಟಿಶಕ್ತಿಯ ಪೂರ್ಣಸ್ವರೂಪವನ್ನು ಸೂಚಿಸುತ್ತದೆ.

**ಶ**ರಣರು ಬಳಸಿದ 'ಶೂನ್ಯ' ಎನ್ನುವ ಮಾತು ಈ 'ಪೂರ್ಣ' ಎನ್ನುವ ಮಾತಿಗೆ ಸಂವಾದಿಯಾಗಿ ಬರುತ್ತದೆ. ಶರಣರ ಮಾತಿನಲ್ಲಿ 'ಶೂನ್ಯ'ವೆಂದರೆ ಏನೂ ಇಲ್ಲದುದು ಎಂದಲ್ಲ, ಅದು ಎಲ್ಲವನ್ನೂ ಒಳಗೊಂಡುದು ಮತ್ತು ಇದೆಲ್ಲದರ ಅಸ್ತಿತ್ವಕ್ಕೆ ಕಾರಣವಾದುದು ಎಂಬ ಅರ್ಥವನ್ನು ಪಡೆಯುತ್ತದೆ. ಶರಣರದು ಬೌದ್ಧಧರ್ಮದ ಅನಾತ್ಮವಾದವಲ್ಲ; ಆತ್ಮವಾದದ ಪೂರ್ಣ ಮಾರ್ಗ. ಆ ವಿಶ್ವಾತ್ಮನೇ ಬಹುರೂಪದಿಂದ ಕೂಡಿದ ಈ ಸೃಷ್ಟಿಯಾಗಿ, ಈ ಸೃಷ್ಟಿಯಲ್ಲಿ ಇರುವ ಜೀವರುಗಳಾಗಿ ಪರಿಣಮಿಸಿ ಮತ್ತೆ ಅದಕ್ಕೆ ಅತೀತನಾಗಿ ನಿಲ್ಲುತ್ತಾನೆ. ಈ ಸೃಷ್ಟಿ ವಿಕಾಸಕ್ರಮದಲ್ಲಿ ಮೊಟ್ಟ ಮೊದಲನೆಯ ಹಂತವನ್ನು ''ಶೂನ್ಯಲಿಂಗ'' ಎಂದು ಶರಣರು ಕರೆದು ಅದರ ಸ್ವರೂಪವನ್ನು ಅನೇಕ ರೀತಿಯಲ್ಲಿ ವರ್ಣಿಸಿದ್ದಾರೆ. ಇವರು ಸೃಷ್ಟಿಯನ್ನು ಬೌದ್ಧರಂತೆ ತೋರಿಕೆಯ ಗಂಧರ್ವನಗರಿ ಎಂದಾಗಲೀ, ಶಂಕರಾಚಾರ್ಯರಂತೆ ಮಾಯೆಯ ಆವರಣದಿಂದ ಕಲ್ಪಿತವಾದ ಮಿಥ್ಯೆಯೆಂದಾಗಲಿ ಭಾವಿಸಲಿಲ್ಲ. ಜಗತ್ತು ಸತ್ಯವಾದುದು ಎಂದು ಹೇಳಿ ಈ ಪರಿಮಿತ ಸತ್ಯದ ಹಿಂದಿರುವ ಅಪರಿಮಿತ ಶಕ್ತಿಯ ಸ್ವರೂಪವನ್ನರಿಯುವ ಮಾರ್ಗವನ್ನು ಪೂರ್ಣದೃಷ್ಟಿಯಿಂದ ಬೋಧಿಸಿದ್ದಾರೆ.

**ನಿ**ರಾಕಾರ ಸ್ವರೂಪವಾದ ಅನಾದಿ ಪರವಸ್ತು ಸೃಷ್ಟಿ ಮುಖವಾಗಿ ಈ ಜಗತ್ತಿನ ನಿರ್ಮಾಣದಲ್ಲಿ ತೊಡಗುತ್ತದೆ; ಬಹುಮುಖವಾದ ಈ ಸೃಷ್ಟಿ ರೂಪುಗೊಳ್ಳಲು ಕಾರಣವಾಗುತ್ತದೆ. ಅದಕ್ಕೆ ಪೂರ್ವದಲ್ಲಿ ಅದು ತಾಳುವ ಮೊಟ್ಟ ಮೊದಲನೆಯ ಸ್ಥಿತಿಯೇ ಶೂನ್ಯಲಿಂಗಸ್ಥಿತಿ. ಇದರ ಸ್ವರೂಪವನ್ನು ಅಲ್ಲಮಪ್ರಭು ಹೀಗೆ ಹೇಳಿದ್ದಾನೆ :

*ಅಯ್ಯಾ, ನಿರವಯ ಶೂನ್ಯಲಿಂಗ ಮೂರ್ತಿಯ ನಿಲುಕಡೆ ಎಂತೆಂದೊಡೆ*
*ಸಾಕಾರ ನಿರಾಕಾರನಲ್ಲ ನೋಡಾ, ನಿರವಯ ಶೂನ್ಯಲಿಂಗ ಮೂರ್ತಿ;*
*ಆದಿಯಲ್ಲ, ಅನಾದಿಯಲ್ಲ; ಇಹದವನಲ್ಲ, ಪರದವನಲ್ಲ;*
*ಸುಖದವನಲ್ಲ, ದುಃಖದವನಲ್ಲ; ನಿರವಯ ಶೂನ್ಯಲಿಂಗಮೂರ್ತಿ*
*ಪುಣ್ಯಪಾಪದವನಲ್ಲ; ಕರ್ತೃಭೃತ್ಯನಲ್ಲ, ಕಾರಣಕಾರ್ಯನಲ್ಲ;*
*ಧರ್ಮಕರ್ಮಿಯಲ್ಲ, ಪೂಜ್ಯಪೂಜಕನಲ್ಲ – ಇಂತು ಉಭಯವಳಿದು*
*ಬೆಳಗುವ ನೋಡಾ ನಮ್ಮ ಗುಹೇಶ್ವರಲಿಂಗವು.*

ಇದು ನಿರವಯ ಶೂನ್ಯಲಿಂಗಮೂರ್ತಿಯ ಸ್ವರೂಪ. ಸಾಕಾರನಿರಾಕಾರಗಳು, ಆದಿ ಅನಾದಿಗಳು, ಇಹಪರಗಳು, ಸುಖದುಃಖಗಳು, ಪುಣ್ಯಪಾಪಗಳು ಇವಾವುವೂ ಇಲ್ಲದ ಸತ್ಯದ ಸ್ವರೂಪ ಅದು. ಇಲ್ಲಿಯೂ 'ಇಲ್ಲ' ಎಂಬ ನಿಷೇಧದ ಮಾತು ಬಂದರೂ ಅದು ಬೌದ್ಧರಂತೆ ಅಭಾವದಲ್ಲಿ ನಿಲ್ಲದೆ ''ಈ ಎಲ್ಲ ಇರುವಿಕೆಗಳನ್ನು ಸಂಕಲ್ಪಶಕ್ತಿರೂಪದಲ್ಲಿ ಒಳಗೊಂಡ ಶೂನ್ಯಲಿಂಗ ಅದು'' – ಎಂಬ ಪೂರ್ವಭಾವದಲ್ಲಿ ನಿಲ್ಲುತ್ತದೆ. ಪ್ರಭುದೇವನ ಈ ಮಾತನ್ನೂ ಗಮನಿಸಬಹುದು:

*ಆದಿ ಅನಾದಿ ಇಲ್ಲದಂದು, ಹಮ್ಮುಬಿಮ್ಮುಗಳಿಲ್ಲದಂದು*
*ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು,*
*ಸಚರಾಚರವೆಲ್ಲ ರಚನೆಗೆ ಬಾರದಂದು*
*ಗುಹೇಶ್ವರನೊಬ್ಬನೇ ಇದ್ದೆಯಲ್ಲ ಇಲ್ಲದಂತೆ.*

ಇಲ್ಲಿ ಈ ಕೊನೆಯ ಮಾತು ಬಹಳ ಅರ್ಥವತ್ತಾದುದು: ''ಇದ್ದೆಯಲ್ಲ, ಇಲ್ಲದಂತೆ'' ಇಲ್ಲದಂತೆ ಇರುವ ಪರಿಯನ್ನು ಆ ಪೂರ್ಣಸತ್ಯದ ಸ್ವರೂಪದಲ್ಲಿ ಕಂಡಿದ್ದಾರೆ, ಶರಣರು. ಹಾಗೆಯೇ ಈ ಮಾತುಗಳನ್ನೂ ನೋಡಬಹುದು:

*ಅಂತರವಿಲ್ಲದಂದು, ಬಾಹ್ಯವಿಲ್ಲದಂದು*
*ಆಡಿಮುಡಿ ಒಡಲು ಮತ್ತೊಂದೆಡೆ ಏನೂ ಇಲ್ಲದಂದು,*
*ದಶದಿಕ್ಕುಗಳು ವಿಶ್ವಪ್ರಪಂಚಗಳು, ಏನೂ ಇಲ್ಲದಂದು,*
*ಸ್ಥಾವರಾತ್ಮಕಂಗಳಿಗೆ ಆಧಾರ ಕರ್ತೃ ಎಂಬ ನಾಮಂಗಳೇನೂ ಇಲ್ಲದಂದು,*
*ಸರ್ವಶೂನ್ಯನಿರಾಲಂಬನಾಗಿರ್ದೆಯಲ್ಲ*
*ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ.*
*ಆದಿ ಅನಾದಿಗಳಿಲ್ಲದಂದು, ನಾದ ಬಿಂದು ಕಳೆ ಮೊಳೆದೋರದಂದು,*
*ದೇಹಿದೇಹಂಗಳು ಉತ್ಪತ್ಯವಾಗದಂದು,*
*ಜೀವಾತ್ಮ ಪರಮಾತ್ಮರೆಂಬುವರಿದಂದು,*
*ಸಕಲ ಚರಾಚರಂಗಳ ಸುಳುಹಿಲ್ಲದಂದು,*
*ನೀನು ಶೂನ್ಯಯನಾಗಿ ಇರ್ದೆಯಯ್ಯಾ*
*ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ.*

ಬಸವಣ್ಣ

ಈ ಮಾತುಗಳಲ್ಲಿ ಶೂನ್ಯಲಿಂಗದ ಸ್ವರೂಪವನ್ನು ಕಾಣುತ್ತೇವೆ. ಇಲ್ಲಿ ''ಶೂನ್ಯನಾಗಿ ಇರ್ದೆಯಯ್ಯ'' ಎಂಬ ಮಾತನ್ನು ಗಮನಿಸಬೇಕು. ಇದು ಏನೂ ಇಲ್ಲದ ಶೂನ್ಯವಲ್ಲ, ಎಲ್ಲವನ್ನು ಒಳಗೊಂಡು ''ಇರುವ ಶೂನ್ಯ.'' ಇಂತಹ ಅನೇಕ ವಚನಗಳನ್ನು ಶರಣರ 'ಶೂನ್ಯಲಿಂಗ' 'ನಿಃಕಲಲಿಂಗ'ಗಳ ವರ್ಣನೆಯಲ್ಲಿ ಕಾಣಬಹುದಾಗಿದೆ.

ಈ ತೋರಿಕೆಯ ಸೃಷ್ಟಿಯೆಲ್ಲಾ ಇಂತಹ ಪರಿಪೂರ್ಣ ಅನಾದಿ ಪರಶಿವನಿಂದ ಹೊರಹೊಮ್ಮುತ್ತದೆ. ನಿರಾಕಾರವೇ ಸಾಕಾರಲಿಂಗವಾಗಿ ಆದರಿಂದ ಸೃಷ್ಟಿ ಮುಂದುವರಿದ ಬಗೆಯನ್ನು ಶರಣರ ಮಾತುಗಳಲ್ಲಿ ಹೀಗೆ ಸಂಗ್ರಹಿಸಬಹುದು: ಸರ್ವಶೂನ್ಯ ನಿರಾಲಂಬಸ್ಥಿತಿಯಲ್ಲಿದ್ದ ಶಿವ, ಮೊದಲು ನಿರಂಜನಬ್ರಹ್ಮನಾಗಿ ಪರಿಣಮಿಸಿದ. ಈ ನಿರಂಜನಬ್ರಹ್ಮನಲ್ಲಿ ಉಂಟಾದ ನೆನಹೇ ಓಂಕಾರಶಕ್ತಿ. ಈ ಶಕ್ತಿಯಿಂದ ಶೂನ್ಯಲಿಂಗವಾಯಿತು.ಇದಕ್ಕೆ ಮಹಾಜ್ಞಾನ ಚಿತ್ತು ಎಂಬುದು ಅಂಗವಾಗಿ ಪರಿಣಮಿಸಿತು. ಈ ಶೂನ್ಯಲಿಂಗದಿಂದ ಜ್ಞಾನಚಿತ್ತನ್ನು ಅಂಗವಾಗಿ ಉಳ್ಳ ನಿಷ್ಕಲಬ್ರಹ್ಮ ಉದ್ಭವಿಸಿತು. ಇದರಿಂದ ಚಿನ್ನಾದ ಚಿದ್ಬಿಂದು ಚಿತ್ಕಲೆಗಳು ಹುಟ್ಟಿದವು. ಇವು ತಮ್ಮ ಮೂಲಶಕ್ತಿಯಾದ ಜ್ಞಾನಚಿತ್ತುವಿನೊಡನೆ ಸೇರಿ ಈ ನಾಲ್ಕೂ ಒಟ್ಟುಗೂಡಿ ಓಂಕಾರವೇ ಪೀಠವಾದ ಮಹಾಲಿಂಗವಾಗಿ ಪರಿಣಮಿಸಿತು. ಮಹಾಲಿಂಗದಿಂದ ಪಂಚಸಾದಾಖ್ಯಗಳೂ, ಇವುಗಳಿಂದ ಸದಾಶಿವನ ಪಂಚಮುಖಗಳೂ ಉಂಟಾದವು. ಆದರಿಂದ ಪಂಚಭೂತಗಳು ಹುಟ್ಟಿದುವು. ಆ ಮೂರ್ತಿಯ ಕಣ್ಣು ಮತ್ತು ಮನಸ್ಸಿನಿಂದ ಸೂರ್ಯ ಚಂದ್ರರು ಹುಟ್ಟಿದರು. ಆ ಮೂರ್ತಿಯ ಗೋಪ್ಯಮುಖದಿಂದ ಆತ್ಮ ಆವಿರ್ಭವಿಸಿತು. ಪಂಚಭೂತಗಳು, ಸೂರ್ಯ, ಚಂದ್ರ, ಆತ್ಮ – ಇವು ಆ ಸದಾಶಿವ ಮೂರ್ತಿಯ ಅಷ್ಟತನುಗಳಾಗಿ ಪರಿಣಮಿಸಿದವು. ಹೀಗೆ ಸೃಷ್ಟಿ, ಬಹುಮುಖವಾಗಿ ವಿಕಾಸಗೊಳ್ಳುವುದು ಮತ್ತೆ ಆತ್ಮನಲ್ಲಿಯೇ ಲೀನವಾಗುವುದು. ಇದು ಸರ್ವಶೂನ್ಯ ನಿರಾಲಂಬ ಸ್ವರೂಪನಾದ ಶಿವನ ಲೀಲೆ. ಆತ ''ಲೀಲೆಯಾದೊಡೆ ಉಮಾಪತಿ, ಲೀಲೆ ತಪ್ಪಿದೊಡೆ ಸ್ವಯಂಭು''.

ಇಲ್ಲಿ ಶರಣರ ದೈವತ್ವದ ಕಲ್ಪನೆಯ ವ್ಯಾಪಕವಾದ ಸ್ವರೂಪವನ್ನು ಕಾಣುತ್ತೇವೆ. ಕೇವಲ ಅನುಭವ ಗೋಚರವಾಗುವ ಭೂಮವಾದ ಕಲ್ಪನೆ ಅವರದು. ಬ್ರಹ್ಮ, ವಿಷ್ಣು, ರುದ್ರ, – ಈ ತ್ರಿಮೂರ್ತಿಗಳನ್ನೂ ಮೀರಿನಿಂತ ನಿರ್ಲೇಪ ನಿರಂಜನನ ಆ ನಿಲುವನ್ನು ಅವರು 'ಶೂನ್ಯ' ಎಂದು ಕರೆದರು. ಅದನ್ನು ಕೆಲವು ವೇಳೆ 'ಬಯಲು' – ಎಂಬ ಮಾತಿನಿಂದಲೂ ನಿರ್ದೇಶಿದ್ದಾರೆ. ಸಿದ್ಧರಾಮನು ಹೇಳುವುದು:

*ಬೀಜವೃಕ್ಷದಂತೆ ನೀನೆಪ್ಪೆಯಯ್ಯಾ*
*ನಿರಾಕಾರವೇ ಮೂರ್ತಿಯಾಗಿ, ಮೂರ್ತಿಯೇ ನಿರಾಕಾರವಾಗಿ*
*ಇವೆಲ್ಲವನುಳಿದು ಬಯಲಾಗಿಪ್ಪೆ*
*ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನದೇವಾ.*

ಸಾಕಾರ ಮತ್ತು ನಿರಾಕಾರಗಳು ಬೀಜವೃಕ್ಷನ್ಯಾಯವಿದ್ದಂತೆ, ಯಾವುದು ಮೊದಲು, ಯಾವುದು ಅನಂತರ ಎಂದು ಹೇಳುವಂತಿಲ್ಲ; ಅಂದರೆ ಈ ಸೃಷ್ಟಿ ಅನಾದಿ. ಇದರೊಡನೆಯೇ ರೂಪ ಅರೂಪಗಳು ಉಂಟಾದವು. ಆದರೆ ಅದಕ್ಕೆ ಕಾರಣವಾದ ಪರಾತ್ಪರ ವಸ್ತುವಿನ ಸಹಜಸ್ವರೂಪವು ಇವೆರಡನ್ನೂ ದಾಟಿದ ಆಚೆಯ ನಿಲುವು. ಅದೇ ಬಯಲು.





*ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ;*
*ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ,*
*ಆತನ ಶಾಂತಿ ಸೈರಣೆಯಿಂದ ಹುಟ್ಟಿದಾತ ವಿಷ್ಣು,*
*ಆತನ ಕೋಪದಿಂದ ಹುಟ್ಟಿದಾತ ರುದ್ರ,*
*ಈ ಮೂರು ಪೀಠವಂತಿರಲಿ, ಈ ತತ್ತ್ವತ್ರಯಂಗಳಿಗೆ*
*ತಾನೆ ಕಾರಣವಾಗಿಪ್ಪ ಶರಣನ ನಿಲವನರಿದು*
*ಶರಣೆನುತಿರ್ದೆನು ಕೂಡಲಚೆನ್ನಸಂಗಮದೇವಾ.*

ಎಂಬ ಚೆನ್ನಬಸವಣ್ಣನ ಮಾತನ್ನು ಇಲ್ಲಿ ಗಮನಿಸಬೇಕು. ತ್ರಿಮೂರ್ತಿಗಳ ಉತ್ಪತ್ತಿಗೆ ಕಾರಣವಾದ ಶಕ್ತಿಯನ್ನು 'ಶರಣ' ಎಂದು ನಿರ್ದೇಶಿಸಿದ್ದಾನೆ. ಆ 'ನಿರಾಕಾರಶರಣ'ನನ್ನು ಶರಣರು ಸೃಷ್ಟಿಕ್ರಮದಲ್ಲಿ 'ಮಹಾಲಿಂಗ' ಎಂದು ಕರೆಯುತ್ತಾರೆ. ಆ ಮಹಾಲಿಂಗದ ಉತ್ಪತ್ತಿಗೆ ಕಾರಣವಾದ ತತ್ತ್ವವೇ 'ಶೂನ್ಯಲಿಂಗ' ಅಥವಾ 'ಬಯಲು'. ಆದ್ದರಿಂದಲೇ ಚೆನ್ನಬಸವಣ್ಣ ''ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ'' ಹಾಗೆಯೇ ಸಿದ್ಧರಾಮನು, ನಿರಾಕಾರ ಮತ್ತು ಸಾಕಾರ ಇವೆರಡನ್ನೂ ದಾಟಿ ''ಬಯಲಾಗಿಪ್ಪೆ ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನದೇವಾ'' – ಎನ್ನುತ್ತಾನೆ ಆ ಸತ್ಯವನ್ನು ಕುರಿತು. ಇದನ್ನು ಇನ್ನೂ ಸ್ಪಷ್ಟವಾಗಿ ಅಲ್ಲಮಪ್ರಭುವಿನ ಈ ಕೆಳಗಿನ ವಚನದಲ್ಲಿ ಕಂಡುಕೊಳ್ಳಬಹುದು:

*ವಾರಿ ಬಲಿದು ಕಲ್ಲಾದಂತೆ ಶೂನ್ಯವೇ ಸ್ವಯಂಭುವಾಯಿತ್ತು*
*ಆ ಸ್ವಯಂಭು ಲಿಂಗದಿಂದಾಯಿತ್ತು ಮೂರ್ತಿವತ್ತು*
*ಆ ಮೂರ್ತಿಯಿಂದಾಯಿತ್ತು ವಿಶ್ವೋತ್ಪತ್ತಿ*
*ಆ ವಿಶ್ವೋತ್ಪತ್ತಿಯಿಂದಾಯಿತ್ತು ಸಂಸಾರ*
*ಆ ಸಂಸಾರದಿಂದಾಯಿತ್ತು ಮರವೆ*
*ಆ ಮರೆವೆಯೆಂಬ ಮಹಾಮಾಯೆ ವಿಶ್ವದ ಮುಸುಕಿದಲ್ಲಿ*
*ನಾ ಬಲ್ಲೆ ಬಲ್ಲಿದರೆಂಬ ಅರುಹಿರಿಯರೆಲ್ಲ*
*ತಾಮಸಕ್ಕೊಳಗಾಗಿ ಮೀನಕೇತನನ ಬಲೆಗೆ ಸಿಲುಕಿ*
*ಮಾಯೆಯ ಬಾಯ ತುತ್ತಾದರಲ್ಲಾ ಗುಹೇಶ್ವರಾ.*

ಶೂನ್ಯವೇ ಸ್ವಯಂಭುವಾಯಿತು. ಅದೇ ಮೂರ್ತಿಯಾಗಿ, ಆ ಮೂರ್ತಿಯಿಂದ ವಿಶ್ವೋತ್ಪತ್ತಿ, ಸಂಸಾರ ಮರವೆಗಳುಂಟಾದುದನ್ನು ಇಲ್ಲಿ ಹೇಳಿದ್ದಾನೆ. ಆತನೇ ಇನ್ನೊಂದು ಕಡೆ ಹೇಳುವ:

*ಏನೂ ಇಲ್ಲದ ಬಯಲೊಳಗೊಂದು*
*ಬಗೆಗೊಳಗಾದ ಬಣ್ಣ ತಲೆದೋರಿತ್ತು*
*ಆ ಬಯಲನಾಬಣ್ಣ ಶೃಂಗರಿಸಲು*
*ಬಯಲು ಸ್ವರೂಪಗೊಂಡಿತ್ತು*
*ಅಂತಪ್ಪ ಸ್ವರೂಪಿನ ಬೆಡಗು ತಾನೆ*
*ನಮ್ಮ ಗುಹೇಶ್ವರಲಿಂಗದ ಪ್ರಥಮ ಭಿತ್ತಿ.*

ಏನೂ ಇಲ್ಲದ ಬಯಲಲ್ಲಿ ಒಂದು ಬಣ್ಣ ತಲೆದೋರಿ, ಆದರಿಂದ ಗುಹೇಶ್ವರಲಿಂಗದ ಪ್ರಥಮಭಿತ್ತಿ ಸಿದ್ಧಗೊಂಡು ಮುಂದಿನ ಸೃಷ್ಟಿಗೆ ಕಾರಣವಾಯಿತು – ಎಂಬ ಮಾತನ್ನು ಗಮನಿಸಬೇಕು.

ಹೀಗೆ ಶಿವನ ಮೂಲರೂಪವಾದ ಪರಿಪೂರ್ಣತೆಯನ್ನು ಶರಣರು 'ಶೂನ್ಯ' ಮತ್ತು 'ಬಯಲು' – ಎಂಬ ಪದಗಳಿಂದ ನಿರ್ದೇಶಿಸಿದ್ದಾರೆ. ಈ ಎರಡು ಪದಗಳಿಗೆ ವಿಶಿಷ್ಟವಾದ ಅರ್ಥವನ್ನು ತುಂಬಿ ಹೊಸ ಕಾಂತಿಯನ್ನು ಅವುಗಳಿಗೆ ಕೊಟ್ಟಿದ್ದಾರೆ. ಬೌದ್ಧರಲ್ಲಿ 'ಶೂನ್ಯ' ಮತ್ತು 'ನಿರ್ವಾಣ'ವೆಂಬ ಶಬ್ದಗಳನ್ನು ಕಾಣುವಂತೆ ಶರಣರಲ್ಲಿ 'ಶೂನ್ಯ' 'ಬಯಲು' ಎಂಬ ಎರಡು ಶಬ್ದಗಳನ್ನು ಕಾಣುತ್ತೇವೆ. ಎರಡೂ ಕಡೆಗಳಲ್ಲಿ 'ಶೂನ್ಯ' ಎಂಬ ಮಾತು ಒಂದೇ ಆದರೂ ಮೇಲೆ ನೋಡಿದಂತೆ ಅವುಗಳ ಅರ್ಥದಲ್ಲಿ ಅಗಾಧವಾದ ಅಂತರವಿದೆ. 'ಬಯಲು' ಮತ್ತು 'ನಿರ್ವಾಣ'ಗಳಲ್ಲಿಯೂ ಅಷ್ಟೇ ಅಂತರ ಕಂಡುಬರುತ್ತದೆ.

ಅಕ್ಕಮಹಾದೇವಿ

'ನಿರ್ವಾಣ' ಎಂಬ ಮಾತನ್ನು ಬೌದ್ಧರು ಬಳಸಿದುದು ಅವರ ಶೂನ್ಯದ ಕಲ್ಪನೆಗೆ ಅನುಗುಣವಾಗಿದೆ. ಅಂದರೆ ಅಭಾವವೆಂದು ಸ್ಪಷ್ಟವಾಗಿ ಹೇಳದಿದ್ದರೂ ಯಾವ ಭಾವವೂ ಇಲ್ಲದ ಒಂದು ಸ್ಥಿತಿ ಅದು. 'ನಿರ್ವಾಣ' ಎಂಬ ಮಾತು ಭಗವದ್ಗೀತೆಯಲ್ಲೂ ಒಂದೆರಡು ಕಡೆ ಬರುತ್ತದೆ. *''ಲಭಂತೇ ಬ್ರಹ್ಮನಿರ್ವಾಣಂ'', ''ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾ''* – ಇಲ್ಲಿ ನಿರ್ವಾಣ ಎಂಬುದಕ್ಕೆ ಆನಂದಮಯವಾದ ಸ್ಥಿತಿಯೆಂದೇ ಹೇಳಬೇಕಾಗುತ್ತದೆ. ಇಲ್ಲಿ ಅಭಾವದ ಸೋಂಕಿಲ್ಲ. ಬರುಬರುತ್ತಾ ಕೆಲವು ವೇಳೆ ಬೌದ್ಧರಲ್ಲಿಯೂ ಆನಂದವೆಂಬ ಅರ್ಥದಲ್ಲಿಯೇ ಇದನ್ನು ಬಳಸಿರುವುದೂ ಉಂಟು. ಆದರೆ ಪ್ರಾರಂಭದಲ್ಲಿ ಅದು, ಎಲ್ಲವನ್ನು ಇಲ್ಲಗೈದಾಗ ಉಳಿಯುವ ಸ್ಥಿತಿ ಎಂಬ ನಿಷೇಧಾರ್ಥವನ್ನು

ಕೊಡಲಿಲ್ಲ. 'ಶೂನ್ಯ' ಎಂಬುದಕ್ಕೆ ಪರಿಪೂರ್ಣತೆಯ ಅರ್ಥವನ್ನು ಕೊಟ್ಟು ಅದರಲ್ಲಿ ಲೀನವಾದ ಜೀವಾತ್ಮನ ನಿಲುವನ್ನು *'ಬಯಲು'* ಎಂದು ನಿರ್ದೇಶಿಸಿದರು. ಬಯಲು ಬಯಲಾಗುವುದನ್ನು *'ನಿರ್ಬಯಲು'* ಎಂದೂ ಆಗಾಗ ಅವರು ಹೇಳುವುದುಂಟು.

ವ್ಯಕ್ತಿ ತನ್ನನ್ನು ಪರಿಮಿತಗೊಳಿಸುವ ಆಸೆ, ದ್ವೇಷ, ಮೋಹಗಳನ್ನೆಲ್ಲಾ ನಾಶಗೊಳಿಸಿ, ತನ್ನ ವ್ಯಕ್ತಿತ್ವವನ್ನು ಆ ಪೂರ್ಣ ಶೂನ್ಯದಲ್ಲಿ ಲೀನಗೊಳಿಸಿ ಅದರೊಡನೆ ಸಮರಸವಾಗುವುದು ಎಂಬ ಅರ್ಥವನ್ನು 'ಬಯಲು' ಎಂಬ ಈ ಮಾತಿನಲ್ಲಿ ಕಾಣುತ್ತೇವೆ. 'ನಿರ್ವಾಣಕ್ಕೂ' 'ಬಯಲಿ'ಗೂ ಇರುವ ವ್ಯತ್ಯಾಸವನ್ನು ಈಗ ಸ್ಪಷ್ಟವಾಗಿ ಕಂಡುಕೊಳ್ಳಬಹುದು. 'ನಿರ್ವಾಣ'ವು ಆಶೆ ದ್ವೇಷ ಮೋಹಗಳನ್ನೆಲ್ಲಾ ನಿರಸನ ಗೊಳಿಸಿದನಂತರ ಉಳಿಯುವ ಅಭಾವಸ್ಥಿತಿ. ಆದರೆ 'ಬಯಲು' ಎಂದರೆ ಅವನ್ನೆಲ್ಲಾ ನಿರಸನಗೊಳಿಸಿ ನಂತರ ವಿಕಾಸಗೊಂಡ ಆತ್ಮವು ವಿಶ್ವಾತ್ಮನೊಡನೆ ಸಮರಸಗೊಳ್ಳುವ ಪರಿಪೂರ್ಣಸ್ಥಿತಿ 'ನಿರ್ವಾಣ'ದಲ್ಲಿ ವ್ಯಕ್ತಿ ಏನೂ ಇಲ್ಲದವನಾಗುತ್ತಾನೆ; 'ಬಯಲಿ'ನಲ್ಲಿ ಎಲ್ಲವೂ ತಾನೇ ಆಗಿ ಪರಿಣಮಿಸುತ್ತಾನೆ.

*ಏನೆಂಬೆನೇನೆಂಬೆ, ಏನೆಂಬೇನೆಂಬೆ, ಎರಡೊಂದಾದುದ?*
*ಏನೆಂಬೆನೇನೆಂಬೆನವಿರಳಘನವ?*
*ಮಹಾದಾನಿ ಕೂಡಲಸಂಗಮದೇವ ತಾನೇ ಬಲ್ಲ.*

ಎಂದು ಬಸವಣ್ಣನವರು ಹೇಳುವ ಮಾತನ್ನು ನೋಡಬಹುದು. ಎರಡು ಒಂದಾಗುವ ಅವಿರಳಘನ – ಅದೇ 'ಬಯಲು' ಈ 'ಘನ' ಎಂಬ ಮಾತನ್ನೂ ಶರಣರು 'ಶೂನ್ಯ' 'ಬಯಲು' ಗಳಂತೆಯೇ ವಿಶಿಷ್ಟವಾದ ಅರ್ಥದಲ್ಲಿ ಬಳಸಿದ್ದಾರೆ.

*ಘನಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿರ್ದೆನಯ್ಯಾ;*
*ಕೂಡಲಸಂಗಮದೇವನೆಂಬ ಮಹಾಬೆಳಗಿನೊಳಗಿರ್ದು*
*ಶಬ್ದ ಮುಗ್ಧವಾದುದೇನೆಂಬೆನಯ್ಯ.*

'ಘನ'ಕ್ಕೆ ಘನವಾಗುವುದು, ಮಹಾಬೆಳಗಿನಲ್ಲಿ ಶಬ್ದ ಮುಗ್ಧವಾಗುವುದು – ಇವು ಬಯಲಿನ ಸ್ವರೂಪವನ್ನು ಸೂಚಿಸುತ್ತವೆ. ಬಸವಣ್ಣನವರ ಇನ್ನೂ ಒಂದು ವಚನವನ್ನು ನೋಡಬಹುದು:

*ಬಯಲರೂಪ ಮಾಡಬಲ್ಲಾತನೇ ಶರಣ;*
*ಆ ರೂಪ, ಬಯಲ ಮಾಡಬಲ್ಲಾತನೇ ಲಿಂಗಾನುಭಾವಿ*
*ಈ ಬಯಲು, ರೂಪಮಾಡಲರಿಯದಿರ್ದಡೆ ಎಂತು ಶರಣನೆಂಬೆ?*
*ಆ ರೂಪ, ಬಯಲು ಮಾಡಲರಿಯದಿರ್ದಡೆ*
*ಎಂತು ಲಿಂಗಾನುಭಾವಿಯೆಂಬೆ?*
*ಈ ಉಭಯವನೊಂದಾಗಿಯರಿಯದಿರ್ದಡೆ*
*ನಿಮ್ಮಲ್ಲಿ ತೆರಹುಂಟೇ ಕೂಡಲಸಂಗಮದೇವಾ.*

ಬಯಲು ಮತ್ತು ರೂಪಗಳ ಮೂಲಕ ಶಿವ ಜೀವರ ಸಂಬಂಧವನ್ನು ಇಲ್ಲಿ ಬಸವಣ್ಣನವರು ಮಾಡಿಕೊಟ್ಟಿದ್ದಾರೆ. ಅಲ್ಲಮಪ್ರಭುಗಳು ಹೇಳುವ ಈ ಮಾತಂತೂ ಬಯಲಿನ ಅನೇಕ ಅರ್ಥಗಳನ್ನು ಸೂಚ್ಯವಾಗಿ ನಿರ್ದೇಶಿಸುತ್ತಿದೆ:

*ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು*
*ಬಯಲು ಬಯಲಾಗಿ ಬಯಲಾಯಿತ್ತಯ್ಯ*
*ಬಯಲು ಜೀವನ ಬಯಲ ಭಾವನೆ*
*ಬಯಲು ಬಯಲಾಗಿ ಬಯಲಾಯಿತ್ತಯ್ಯ*
*ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು*
*ನಾ ನಿನ್ನ ನಂಬಿ ಬಯಲಾದೆ ಗುಹೇಶ್ವರಾ.*

ಬಯಲಿನ ಅನೇಕ ಛಾಯೆಗಳನ್ನು ಇಲ್ಲಿ ಕಾಣಬಹುದು. ಚನ್ನಬಸವಣ್ಣ ತನ್ನೊಂದು ವಚನದಲ್ಲಿ ಈ ಅರ್ಥವನ್ನು ಇನ್ನೊಂದು ರೀತಿ ವ್ಯಕ್ತಪಡಿಸಿದ್ದಾನೆ:

*ತನು ಬಯಲು ನಿರವಯದೊಳಡಗಿತ್ತು*
*ಮನ ಬಯಲು ನಿರವಯದೊಳಗಡಗಿತ್ತು*
*ಭಾವ ಬಯಲು ನಿರವಯದೊಳಡಗಿತ್ತು*
*ಬಯಲು ಬಯಲ ಬೆರಸಿ ಬಯಲೇಯಾಯಿತ್ತು*
*ಕೂಡಲ ಚೆನ್ನಸಂಗಯ್ಯನೆಂಬ ನುಡಿಯಡಗಿತ್ತು.*

ಬಯಲು ಬಯಲನ್ನು ಸೇರಿ ಬಯಲೇ ಆಗಿ ಉಳಿಯುತ್ತದೆ. ಅಲ್ಲಿ ಕೂಡಲ ಚೆನ್ನಸಂಗಯ್ಯನೆಂಬ ನಾಮವೂ ಅಡಗುತ್ತದೆ. ಷಣ್ಮುಖಸ್ವಾಮಿಯು, ಬಯಲು ನಿರವಯಲು, ನಿಶ್ಶೂನ್ಯ – ಈ ಮೊದಲಾದ ಮಾತುಗಳನ್ನು ಬಳಸಿಕೊಂಡು ಒಂದು ಸುಂದರವಾದ ಸಾದೃಶ್ಯದಿಂದ ಲಿಂಗಾಂಗಸಾಮರಸ್ಯದ ನಿಲುವನ್ನು ಹೀಗೆ ವರ್ಣಿಸಿದ್ದಾನೆ.

*ಬಯಲ ಸ್ತ್ರೀಯಳ ನಿರವಯಲ ಪುರುಷ ಬಂದು ಕೂಡಲು*
*ಚಿದ್ಘನವೆಂಬ ಶಿಶು ಹುಟ್ಟಿತು. ಆ ಶಿಶುವಿನ*
*ಮಹಾನುಭಾವವೆಂಬ ಬಯಲ ತೊಟ್ಟಲೊಳಗೆ ಮಲಗಿಸಿ*
*ನಿರಾಳ ನಿಶ್ಶೂನ್ಯವೆಂಬ ನೇಣುಗಳ ಕಟ್ಟಿ*
*ತಾನಾಗಿ ಜೋಗುಳ ಪಾಡಲು, ಆ ಶಿಶುವು*
*ತನ್ನಿಂದ ತಾನೇ ತಂದೆ ತಾಯಿಗಳ ಇಬ್ಬರ ನುಗಿತ್ತು.*
*ಆ ತಂದೆ ತಾಯಿಗಳ ನುಂಗಲೊಡನೆ*
*ಜೋಗುಳ ಉಲುಹು ಅಡಗಿತ್ತು,*
*ಆ ಜೋಗುಳ ಉಲುಹು ಅಡಗಲೊಡನೆ*
*ನಿರಾಳ ನಿಶ್ಶೂನ್ಯವೆಂಬ ನೇಣುಗಳು ಹರಿದುವು.*
*ಆ ನಿರಾಳ ನಿಶ್ಶೂನ್ಯ ನೇಣು ಹರಿಯಲೊಡನೆ*
*ಆ ಶಿಶುವು ತೊಟ್ಟಲ ಸಹವಾಗಿ ಬಟ್ಟಬಯಲಾಯಿತು.*
*ಆ ಶಿಶುವು ತೊಟ್ಟಲ ಬಟ್ಟಬಯಲಾಗಲೊಡನೆ*
*ಅಖಂಡೇಶ್ವರನೆಂಬ ಬಯಲು*
*ಬಚ್ಚಬರಿಯಬಚ್ಚ ಘನಗಂಭೀರ ಮಹಾಬಯಲೊಳಗೆ*
*ನಾನೆತ್ತ ಹೋದೆನೆಂದರಿಯೆನು.*

ಬೇರೆ ಬೇರೆ ದೃಷ್ಟಿಗಳಿಂದ ವಿವರಿಸಿದಷ್ಟೂ ವಿಸ್ತಾರವಾದ ಅರ್ಥವನ್ನು ಕೊಡುವ ಆಧ್ಯಾತ್ಮಿಕ ಅನುಭವ ಇಲ್ಲಿದೆ.





ಈ ಆನಂದದ ನಿಲುವನ್ನು ಪಡೆಯುವುದನ್ನೇ ಶರಣರು ತಮ್ಮ ಸಾಧನೆಯ ಮಾರ್ಗದಲ್ಲಿ ರೂಪಿಸಿದ್ದಾರೆ. ಅವರ ಉಪಾಸನೆಯಲ್ಲಿಯೂ ಈ ಬಯಲಿನ ಕಲ್ಪನೆಯ ಜ್ಞಾನಮಾರ್ಗ ಪ್ರಧಾನವಾಗಿ ಕಾಣುತ್ತದೆ. ಬಯಲೇ ಮೂರ್ತಿಗೊಂಡು ಬಂದ ಆ ಪರಶಿವನನ್ನು ಮಾನವರೂಪದಿಂದ ಪೂಜಿಸುವುದಕ್ಕಿಂತ ಬಯಲಿನ ಸಂಕೇತದಿಂದಲೇ ಅನುಸಂಧಾನಮಾಡುವುದು ಅವರಿಗೆ ಹೆಚ್ಚು ಪ್ರಿಯವಾಗಿ ತೋರಿತು. ಅಪಾರವಾದ ಆ ಬಯಲಿನ ವ್ಯಾಪಕತೆಯನ್ನೆಲ್ಲಾ ಸಂಕೇತ ರೂಪದಿಂದ ಇಷ್ಟಲಿಂಗದಲ್ಲಿ ಅಡಗಿಸಿ ಅದನ್ನು ಕರಸ್ಥಲದಲ್ಲಿಟ್ಟು ಪೂಜಿಸುತ್ತಾರೆ ಶರಣರು.

*ಕಾಣಬಾರದ ಲಿಂಗವು ಕರಸ್ಥಲಕ್ಕೆ ಬಂದರೆ*
*ಎನಗಿದು ಸೋಜಿಗ, ಎನಗಿದು ಸೋಜಿಗ,*
*ಅಹುದೆನಲಮ್ಮೆನು ಅಲ್ಲೆನಲಮ್ಮೆನು*
*ಗುಹೇಶ್ವರಲಿಂಗ ನಿರಾಕಾರಬಯಲು ಆಕಾರವಾದರೆ.*

ನಿರಾಳ ನಿರಾಕಾರವಾದ ಬಯಲು ಆಕಾರವಾಗಿ ಕರಸ್ಥಲಕ್ಕೆ ಬಂದು ಉಪಾಸನೆಗೊಳ್ಳುತ್ತಿರುವುದೇ ಸೋಜಿಗ – ಎನ್ನುತ್ತಾನೆ ಪ್ರಭು. ಅಕ್ಕಮಹಾದೇವಿ ತನ್ನ ಒಂದು ವಚನದಲ್ಲಿ ಈ ಅಭಿಪ್ರಾಯವನ್ನು ಹೀಗೆ ಹೇಳಿದ್ದಾಳೆ:

*ಪಾತಾಳವಿತ್ತತ್ತ ಪಾದಂಗಳತ್ತತ್ತ*
*ದಶದಿಕ್ಕು ಇತ್ತಿತ್ತ, ದಶಭುಜಗಳತ್ತತ್ತ*
*ಬ್ರಹ್ಮಾಂಡವಿತ್ತತ್ತ ಮಣಿಮಕುಟವತ್ತತ್ತ*
*ಚೆನ್ನಮಲ್ಲಿಕಾರ್ಜುನಯ್ಯ ನೀವೆನ್ನ ಕರಸ್ಥಳಕ್ಕೆ ಬಂದು*
*ಚುಳುಕಾದಿರಲ್ಲಾ ಲಿಂಗವೇ.*

ವಿಶ್ವವನ್ನೆಲ್ಲಾ ವ್ಯಾಪಿಸಿ ಮೀರಿ ನಿಂತಿರುವ ಪರಿಪೂರ್ಣ ಶೂನ್ಯ ಸ್ವರೂಪವಾದ ಶಿವತತ್ತ್ವ, ಮಹಾದೇವಿಯ ಕರಸ್ಥಲಕ್ಕೆ ಬಂದು ಚುಳುಕಾಗಿದೆ. ಆ ಉಪಾಸನೆಯ ಅನುಭವವನ್ನು ಈ ಕೆಳಗಿನ ವಚನದಲ್ಲಿ ಕಾಣಬಹುದು:

*ಬಯಲ ಮೂರ್ತಿಯ ಮಾಡಿ ಎನ್ನ ಕರಸ್ಥಲಕ್ಕೆ ಕೊಟ್ಟನಯ್ಯ ಶ್ರೀಗುರು*
*ಆ ಬಯಲ ಮೂರ್ತಿಯ ಅಮೂರ್ತಿಯ ಮಾಡಿ*
*ಎನ್ನ ಪ್ರಾಣದೊಳಗೆ ಇರಿಸಿದನಯ್ಯಾ ಶ್ರೀಗುರು*
*ಬಯಲು ಬಯಲನೇ ಬಯಸಿ ಬಯಲೆಂದೆನಿಸಿ*
*ಎನ್ನ ಭಾವದಲ್ಲಿರಿಸಿದನಯ್ಯ ಶ್ರೀಗುರು*
*ಇದು ಕಾರಣ ಎಲ್ಲ ಕರಸ್ಥಲ, ಮನಸ್ಥಲ, ಭಾವಸ್ಥಲದಲ್ಲಿ ಧರಿಸಿ*
*ನಾನು ಅಂಗಲಿಂಗ ಸಂಬಂಧಿಯಾದೆನಯ್ಯ*
*ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.*

ಹೀಗೆ ಶೂನ್ಯವೇ ಮೂರ್ತಿಗೊಂಡು ಬಯಲಿನ ಕುರುಹಾಗಿ ಬಂದ ಇಷ್ಟಲಿಂಗದ ಅನುಸಂಧಾನ ಶರಣವನ್ನು ಕೊನೆಯಲ್ಲಿ ಆ ಬಯಲಿನ ನಿಲವಿಗೇ ತರುತ್ತದೆ. ಅದನ್ನು ಅಲ್ಲಮಪ್ರಭು ಈ ವಚನಗಳಲ್ಲಿ ಅರ್ಥವತ್ತಾಗಿ ನಿರೂಪಿಸಿದ್ದಾನೆ:

*ಘನವ ಕಂಡು ಮನವು ಗ್ರಹಿಸಿತ್ತು*
*ಕಂಡು ಕಂಡು ಮನ ಮಹಾಘನವಾಯಿತ್ತು*
*ತತ್ತಲ್ಲೀಯವಾಯಿತ್ತು ತದುಗತವಾಯಿತ್ತು*
*ಶಬ್ದಮುಗ್ಧವಾದುದನೇನೆಂಬೆ ಗುಹೇಶ್ವರಾ.*
*ಮನದ ಕೊನೆಯ ಮೇಲೆ ನೆನೆದ ನೆನಹು*
*ಜನನಮರಣವ ನಿಲಿಸಿ ಜ್ಞಾನಜ್ಯೋತಿಯ ಉಭಯ*
*ಭಾನುಕೋಟಿಯ ಮೀರಿ*
*ಸ್ವಾನುಭಾವದ ಉದಯ ಜ್ಞಾನಶೂನ್ಯದಲಡಗಿದ*
*ಘನವನೇನೆಂಬೆನು ಗುಹೇಶ್ವರಾ.*

*"ಸ್ವಾನುಭಾವದ ಉದಯಜ್ಞಾನ ಶೂನ್ಯದಲ್ಲಿ ಅಡಗಿತು"* – ಎಂಬ ಮಾತು ಮನನೀಯವಾದುದು. ಸ್ವಾನುಭಾವದ ನಿಲವು ನಮ್ಮನ್ನು "ಜ್ಞಾನಶೂನ್ಯ"ದಲ್ಲಿ ಅಡಗಿಸುತ್ತದೆ. ಈ ಕೆಳಗಿನ ವಚನ ಶರಣರ ಶೂನ್ಯದ ವ್ಯಾಪಕತೆಯನ್ನೂ ಅವರ ಮೋಕ್ಷದ ಕಲ್ಪನೆಯನ್ನೂ ಮಾಡಿಕೊಡುತ್ತದೆ:

*ಕರ್ಪೂರದ ಕಳ್ಳನ ಹುಲ್ಲಿನಲ್ಲಿ ಕಟ್ಟಿರಲು*
*ಅಗ್ನಿ ಎಂಬ ಹಿತವು ಬಂದು ಬಿಡಿಸಲು*
*ಪಾಶ ಬೆಂದು ಕಳ್ಳ ತನ್ನಲ್ಲಿಯೇ ಅಡಗಿದನು*
*ಬಯಲ ಶರಣಂಗೆ, ಬಯಲ ಪಾಶ ಬಂದು ಕಟ್ಟಿರಲು*
*ಬಯಲ ಲಿಂಗ ಬಂದು ಬಿಡಿಸಲು*
*ಬಯಲು ಬಯಲೇಕವಾಯಿತ್ತು*
*ಮಹಾಲಿಂಗ ಕಲ್ಲೇಶ್ವರನೆಂಬ ಸಂಪತ್ತು*
*ಸದಾಶೂನ್ಯವಾಯಿತ್ತು.*

ಲಿಂಗಾಂಗಸಾಮರಸ್ಯದ ಹೇಳುವಾಗ "ಉರಿಯುಂಡ ಕರ್ಪೂರದಂತೆ" ಎಂಬ ಮಾತು ಶರಣರಿಗೆ ಬಹಳ ಪ್ರಿಯವಾದುದು. ಇಲ್ಲಿ ಹಾವಿನ ಹಾಳ ಕಲ್ಲಯ್ಯ ಇದೇ ಮಾತನ್ನು "ಕರ್ಪೂರದ ಕಳ್ಳನನ್ನು ಬೆಂಕಿ ಬಂದು ಬಿಡಿಸಿತೆ"ಂಬ ಸಾದೃಶ್ಯದಿಂದ ಹೇಳಿದ್ದಾನೆ. ಹುಲ್ಲಿನ ಕಟ್ಟುಗಳು ಬೆಂದು ಬೂದಿಯಾದುವು; ಕರ್ಪೂರ ಅದರಲ್ಲಿ ಅಡಗಿಹೋಯಿತು. ಹಾಗೆಯೇ ಬಯಲು, ಬಯಲು ಏಕವಾಯಿತು – ಎನ್ನುತ್ತಾನೆ ಕಲ್ಲಯ್ಯ. ಹೀಗೆ ಕೇವಲ ಅನುಭವೇವೇದ್ಯವಾಗಬಹುದಾದ ಅನುಭಾವದ ಮಟ್ಟಕ್ಕೆ ಶರಣರ ಬಯಲಿನ ಕಲ್ಪನೆ ಏರುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ ಶರಣರ ಶೂನ್ಯತತ್ತ್ವ ಅಗಾಧವಾದ ಅರ್ಥವನ್ನು ಒಳಗೊಂಡಿರುವ ಮತ್ತು ಅನುಭವ ಪ್ರಧಾನವಾದ ತಾತ್ವಿಕವಿವೇಚನೆಯಾಗಿ ಪರಿಣಮಿಸಿದೆ. ಬೌದ್ಧರಂತೆ ಅವರು ಅನಾತ್ಮವಾದದ ಮಾರ್ಗವನ್ನು ಹಿಡಿಯದೇ ಹಿಂದೂ ಧರ್ಮದ ತಳಹದಿಗೆ ಅನುಗುಣವಾದ ರೀತಿಯಲ್ಲಿ ಆತ್ಮವಾದದ ಮಾರ್ಗವನ್ನು ಅವಲಂಬಿಸಿದರು. ಮಾತಿಗೆ ನಿಲುಕದ ಪರಿಪೂರ್ಣ ಶೂನ್ಯವನ್ನು ಮಾತುಗಳಲ್ಲಿ ಹಿಡಿದಿಡುವ ಸಾಹಸವನ್ನು ಶರಣರು ಯಶಸ್ವಿಯಾಗಿ ನಿರ್ವಹಿಸಿದರು. ಆಳವಾಗಿ ಆ ತತ್ತ್ವವನ್ನು ವಿವೇಚಿಸಿದರು. ಆ ಶೂನ್ಯತ್ತ್ವದ ತೌಲನಿಕವಾದ ಅಧ್ಯಯನ ಇನ್ನೂ ಹೆಚ್ಚಾಗಿ ಆಗುವುದು ಅವಶ್ಯಕ.

❋

## ವಚನಗಳ ವಿಶ್ಲೇಷಣೆ

*ಪುಣ್ಯ ಪಾಪವೆಂಬವು ತಮ್ಮಿಷ್ಟ ಕಂಡಿರೇ !*
*"ಅಯ್ಯ" ಎಂದಡೆ ಸ್ವರ್ಗ !*
*"ಎಲವೋ" ಎಂದಡೆ ನರಕ !!*
*ದೇವ-ಭಕ್ತ-ಜಯ-ಜೀಯಾ ಎಂಬ ನುಡಿಯೊಳಗೆ*
*ಕೈಲಾಸವೈದುವುದು ಕೂಡಲಸಂಗಮದೇವ !*

ಪುಣ್ಯ ಪಾಪಗಳ ಬಗ್ಗೆ ಜನರು ಅದ್ಭುತ ಅತಿರೇಕ ಕಲ್ಪನೆಗಳನ್ನು ಇಟ್ಟುಕೊಂಡಿರುವಂತೆ ಕಾಣುವುದು, ಪಾಪವನ್ನು ಗಳಿಸುವುದು ಮಾತ್ರ ಅತಿಸುಲಭ, ಪುಣ್ಯವನ್ನು ಗಳಿಸುವುದು ಕಡು ಕಷ್ಟ – ಎಂಬುದೇ ಅವರ ಸಾಮಾನ್ಯ ಗ್ರಹಿಕೆ. ಆದುದರಿಂದಲೇ ಪುಣ್ಯ ಕಾರ್ಯವೆಂದರೆ ನಮ್ಮಿಂದ ಸುಲಭ ಸಾಧ್ಯವಲ್ಲವೆಂದು ತಟಸ್ಥರಾಗುವರು; ಅಥವಾ ಪಾಪದ ಕಡೆಗೇ ಒಲುವರು. ಇದು ಸರಿಯಲ್ಲ. ಪಾಪ ಪುಣ್ಯಗಳೆರಡರಲ್ಲಿ ಯಾವುದನ್ನು ಗಳಿಸುವುದೂ ಸುಲಭವೇ – ಆದರೆ ಗಳಿಸುವ ದಾರಿ ಮಾತ್ರ ಬೇರೆ ಬೇರೆಯಷ್ಟೇ! 'ಅಯ್ಯ' ಎಂದು ಪರಸ್ಪರ ಸಹಕಾರ-ಗೌರವ ಭಾವಗಳಿಂದ ಜನರೊಡನೆ ವ್ಯವಹರಿಸಿದರೆ ಪುಣ್ಯ, ಅದರಿಂದ ಸ್ವರ್ಗ! ಎಲವೋ ಎಂದು ಪ್ರತಿಷ್ಠೆ-ದುರಹಂಕಾರ ಮೊದಲಾದ ಸಮಾಜ ವಿರುದ್ಧ ರೀತಿಯಲ್ಲಿ ನಡೆದುಕೊಂಡರೆ ಪಾಪ. ಅದರಿಂದ ನರಕ! ಪುಣ್ಯ-ಪಾಪಗಳೆಂಬವು, ಸ್ವರ್ಗ-ನರಕಗಳೆಂಬವು ನಮ್ಮ ಕೈಯಿ ಬಾಯಿಗಳಿಂದ ಮಾಡಿಕೊಳ್ಳುವ ನಮ್ಮ ಸ್ವಂತ ಸೃಷ್ಟಿಗಳು.

*ದೇವಲೋಕ-ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರಣ್ಣ*
*ಸತ್ಯವ ನುಡಿವುದೇ ದೇವಲೋಕ !*
*ಮಿಥ್ಯವ ನುಡಿವುದೇ ಮರ್ತ್ಯಲೋಕ !*
*ಆಚಾರವೇ ಸ್ವರ್ಗ !*
*ಅನಾಚಾರವೇ ನರಕ !*
*ನೀವೇ ಪ್ರಮಾಣು ಕೂಡಲಸಂಗಮದೇವ !*

ದೇವಲೋಕವೆಂಬ ಆಕಾಶದಲ್ಲೆಲ್ಲೂ ಇಲ್ಲ, ಅದಿರುವುದು ಈ ನೆಲದ ಮೇಲೆ. ಸತ್ಯವನ್ನು ಬಳಸಿದರೆ ಆ ಸುತ್ತಮುತ್ತೆಲ್ಲ ದೇವಲೋಕವಾಗಿ ಮಾರ್ಪಡುವುದು, ಎಂದಿನಂತೆ ಮಿಥ್ಯಾಚಾರ ವನ್ನೇ ಮುಂದುವರಿಸಿದರೆ, ನಾವು ನಿಂತ ಹೊಲ- ಮೇರೆಯೆಲ್ಲ ಅದೇ ಮರ್ತ್ಯಲೋಕವಾಗಿ ಉಳಿದಿರುವುದು. ಸ್ವರ್ಗ-ನರಕಗಳ ಮಾತಾದರೂ ಅಷ್ಟೇ. ಅನಾಚಾರದಿಂದ ಈ ನೆಲವೇ ನರಕವಾಗುವುದು. ಸದಾಚಾರದಿಂದ ಅದೇ ಸ್ವರ್ಗವಾಗುವುದು. ಎಂದೇ ಪ್ರತಿಯೊಬ್ಬರೂ ಈ ಭೂಲೋಕದಲ್ಲಿ ತಮ್ಮ ತಮ್ಮ ಪರಿಧಿಯಷ್ಟು ಪ್ರದೇಶವನ್ನಾದರೂ ಸತ್ಯದಿಂದ ಸದಾಚಾರದಿಂದ ದೇವಲೋಕವಾಗಿಸಬೇಕು, ಸ್ವರ್ಗವಾಗಿಸಬೇಕು !

*ದೇವಲೋಕ-ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ*
*ಕೇವಲ ಶರಣನಾಗಲರಿಯ !*
*ಸತ್ತು ಬೆರೆಸಿಹೆನೆಂದರೆ*
*ಕಬ್ಬಿನ ತುದಿಯ ಮೆಲಿದಂತೆ*
*ಕೂಡಲ ಸಂಗಮದೇವ !*

ನಾನು ಹುಟ್ಟಿರುವುದು ಈ ಮರ್ತ್ಯಲೋಕದಲ್ಲಿ, ಹೋಗಿ ಬಾಳಬೇಕಾದುದು ಆ ದೇವಲೋಕದಲ್ಲಿ. ಈ ಮರ್ತ್ಯಲೋಕ ಮಣ್ಣುಮಯ, ಆ ದೇವಲೋಕ ಚಿನ್ಮಯ ಎಂದು ನಡೆದವನು ವಂಚಿತನಾಗುತ್ತಾನೆ. ಬಾಳಬೇಕಾದುದು ಇಲ್ಲಿ, ಈ ಮರ್ತ್ಯಲೋಕ ದಲ್ಲಿ. ಚೆನ್ನಾಗಿ ಬಾಳಿದರೆ ನಮ್ಮ ಬದುಕು ಚಿನ್ನವಾಗುವುದು ಇಲ್ಲೇ, ಈ ಮರ್ತ್ಯಲೋಕದಲ್ಲೇ! ಇದನ್ನರಿಯದೆ ಸತ್ತು ಸ್ವರ್ಗದಲ್ಲಿ ಸುಖಿಸುವೆನೆಂದರೆ – ಮಣ್ಣಿಗೆ ಹತ್ತಿರವಾಗಿರುವುದೆಂದು ಕಬ್ಬಿನ ಸಾರವತ್ತಾದ ಅಡಿ ಭಾಗವನ್ನು ತಿರಸ್ಕರಿಸಿ ಬಿಟ್ಟು, ಸಾರಹೀನವಾದ ತುದಿಯ ತೊಂಡೆ ಜೊಂಡನ್ನು ತಿಂದಂತೆ ಗಾಂಪತನವಾದೀತು.

ಎರಡನೆಯದಾಗಿ ಇಲ್ಲಿ ಬಸವಣ್ಣನವರು ತಮ್ಮ ಕಾಲಕ್ಕೆ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಆತ್ಮಹಿಂಸೆಯನ್ನೂ, ಆತ್ಮಹತ್ಯೆಯನ್ನೂ ಕುರಿತು ವಿಷಣ್ಣವಿಡಂಬನೆ ಮಾಡಿರುವರು.

*ಲಿಂಗದಲ್ಲಿ ಸಮ್ಯಕ್ಕರು*
*ಲಿಂಗದಲ್ಲಿ ಸದರ್ಥರು*
*ಲಿಂಗದಲ್ಲಿ ಸೊಮ್ಮು ಸಂಬಂಧವನರಿತ ಸ್ವಾಮಿ ಭೃತ್ಯರೆಲ್ಲರೂ*
*ನಿಮ್ಮ ಬೇಡೆನಂಜದಿರಂಜದಿರಿ !*
*ಎನಗೆ ಮರ್ತ್ಯಲೋಕದ ಮಹಾಗಣಂಗಳುಂಟು !*
*ಇದು ಕಾರಣ,*
*ಕೂಡಲ ಸಂಗಮದೇವರ ಲೋಕವ*
*ಹಂಚಿಕೊಳ್ಳಿ ನಿಮನಿಮಗೆ !*

ಬಸವಣ್ಣನವರಿಗೆ ಶಿವಲೋಕವೆಂದರೆ, ಅಲ್ಲಿಯ ಫಲ-ಪದವಿಗಳೆಂದರೆ ಆಕರ್ಷಣೆಯೇನೂ ಇಲ್ಲ. ಅವರಿಗೆ ತಾವು ನಡೆದಾಡುವ ಈ ಭೂಮಿಯೇ ಕೈಲಾಸ, ಭೂಲೋಕದ ಮಹನೀಯರ ಸೇವೆಯೇ ಸಕಲ ಸಂಪತ್ತು. ಜಂಗಮಲಿಂಗ ಸ್ವರೂಪಿಗಳಾದ ಜನಕೋಟಿಯ ಪರಿಚರ್ಯೆ- ಉದ್ಧರಣೋದ್ಯೋಗದ ಕಡೆ ಅವರು ಸದಾ ಮನ ತೆತ್ತವರು. ಆದುದರಿಂದಲೇ ಕೈಲಾಸದಲ್ಲಿ ತುಂಬಿಕೊಂಡು ಶಿವಸಂಪತ್ತಿನ ದಾಯಾದಿಗಳಂತೆ ಹಾತೊರೆಯುತ್ತಿರುವ ಪ್ರಮಥಗಣ- ರುದ್ರಗಣಗಳನ್ನು ಕುರಿತು ಹೇಳುತ್ತಾರೆ – ಈ ಮರ್ತ್ಯಲೋಕದ ಶಿವಶರಣರೇ ನನಗೆ ಸರ್ವಸ್ವ, ಕೈಲಾಸರಾಜ್ಯಶ್ರೀಯನ್ನು ನಿಮ್ಮ ನಿಮ್ಮಲ್ಲೇ ಹಂಚಿಕೊಳ್ಳಿ – ಅದಕ್ಕೆ ನಾನು ನಿಮ್ಮೊಡನೆ ಸ್ಪರ್ಧಿಸುವವನಲ್ಲ, ನೀವು ಬಿಟ್ಟುಹೋದ "ಇಹ"ವನ್ನೇ "ಶಿವಪ್ರಸಾದ"ವೆಂದು ಸ್ವೀಕರಿಸುತ್ತೇನೆ – ಎಂದು ನಿಜವಾದ ಶಿವಪುತ್ರನಂತೆ ಉದ್ಘೋಷಿಸಿರುವರು.

– ಸಂ. ಡಾ. ಎಲ್. ಬಸವರಾಜು
*(ಕೃಪೆ : ಬಸವ ವಚನಾಮೃತ)*





# ಸರ್ವಧರ್ಮ ಸಮನ್ವಯದ ಮಹಾಸಂಗಮ

## ಜ್ಞಾನ ಗಂಗೋತ್ರಿ – ಶ್ರೀ ಸಿದ್ಧಗಂಗಾ ಕ್ಷೇತ್ರ

– ಎಚ್.ಎಸ್. ಸಿದ್ದಗಂಗಪ್ಪ

ಒಂದು ರಾಷ್ಟ್ರದ ಅಭಿವೃದ್ಧಿ, ಆ ರಾಷ್ಟ್ರದ ಸಾಕ್ಷರತೆಯ ಪ್ರಮಾಣದ ಮೇಲೆ ಅವಲಂಬಿತವಾಗಿರುತ್ತದೆ. ಅಜ್ಞಾನ ಮೂಢನಂಬಿಕೆ, ದಾರಿದ್ರ್ಯ ಇವುಗಳಿಗೆ ಮೂಲ ಕಾರಣ ಅನಕ್ಷರತೆ. ಮಹಾತ್ಮ ಗಾಂಧೀಜಿಯವರು ಅನಕ್ಷರತೆಯನ್ನು ಮಾನವನ ಶತ್ರು ಎಂದು ಭಾವಿಸಿದ್ದರು. ವ್ಯಕ್ತಿಯ ಮಾನಸಿಕ ಹಾಗೂ ಬೌದ್ಧಿಕ ವಿಕಾಸಕ್ಕೆ ಶಿಕ್ಷಣ ಅತ್ಯವಶ್ಯಕ ಎಂದು ಶಿಕ್ಷಣ ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ.

ಭಾರತೀಯರು ಪುರಾತನ ಕಾಲದಿಂದಲೂ ವಿದ್ಯೆಗೆ ಉನ್ನತವಾದ ಸ್ಥಾನವನ್ನು ಕೊಡುತ್ತಾ ಬಂದಿರುವುದನ್ನು ಪುರಾಣ, ಇತಿಹಾಸಗಳನ್ನು ಅವಲೋಕಿಸಿದಾಗ ವ್ಯಕ್ತವಾಗುತ್ತದೆ. ವಿದ್ಯೆ ಇಲ್ಲದವರನ್ನು ಪಶುವಿಗೆ ಸಮಾನ ಎಂದು ಹೇಳುವುದರ ಮೂಲಕ ವಿದ್ಯೆಯ ಮಹತ್ವವನ್ನು ತಿಳಿಸಿದ್ದಾರೆ.

ಸ್ವಾತಂತ್ರ್ಯ ಪೂರ್ವದಲ್ಲಿ ಶಿಕ್ಷಣಕ್ಕೆ ಹೆಚ್ಚು ಅವಕಾಶ ಗಳಿರಲಿಲ್ಲ, ಪ್ರಾಥಮಿಕ ಶಿಕ್ಷಣ ಪಡೆಯಲು ವಿದ್ಯಾರ್ಥಿಗಳು ಹತ್ತಾರು ಮೈಲಿ ನಡೆದುಕೊಂಡು ಹೋಗಿ ಬರಬೇಕಾಗಿತ್ತು. ಆರ್ಥಿಕವಾಗಿ ಅನುಕೂಲವಿದ್ದವರಿಗೆ ಮಾತ್ರ ಶಿಕ್ಷಣ ಪಡೆಯಲು ಅವಕಾಶವಿತ್ತು. ಇದರಿಂದ ಸಾವಿರಾರು ಜನ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳು ಶಿಕ್ಷಣ ಪಡೆಯಲು ಸೂಕ್ತ ಅವಕಾಶವಿಲ್ಲದೆ ವಂಚಿತರಾಗುತ್ತಿದ್ದರು. ಎಷ್ಟೋ ಜನ ವಿದ್ಯಾರ್ಥಿಗಳಿಗೆ ಕಲಿಯಬೇಕೆಂಬ ಆಸೆಯಿದ್ದರೂ, ಅವಕಾಶವಿಲ್ಲದೆ ಅವರ ಬಯಕೆಯ ಬಳ್ಳಿ ಕಮರಿ ಹೋಗುತ್ತಿತ್ತು.

### ಸಿದ್ಧಗಂಗಾ ಕ್ಷೇತ್ರ

ಸುಮಾರು ಆರುನೂರು ವರ್ಷಗಳ ಸುದೀರ್ಘ ಇತಿಹಾಸ, ಭವ್ಯ ಪರಂಪರೆಯುಳ್ಳ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಅನೇಕ ಜನ ಗುರುಗಳು ಆಗಿ ಹೋಗಿದ್ದಾರೆ. ಅವರೆಲ್ಲರೂ ತಮ್ಮ ಇತಿಮಿತಿಯಲ್ಲಿ ಶ್ರೀಕ್ಷೇತ್ರವನ್ನು ಆಧ್ಯಾತ್ಮಿಕ ಕೇಂದ್ರವನ್ನಾಗಿ ಮಾಡಲು ತಮ್ಮ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ. ಶ್ರೀ ಕ್ಷೇತ್ರವನ್ನು ಆಧ್ಯಾತ್ಮಿಕ ಕೇಂದ್ರದ ಜೊತೆಗೆ ದಾಸೋಹ ಹಾಗೂ ಶೈಕ್ಷಣಿಕ ಕೇಂದ್ರವನ್ನಾಗಿ ಮಾಡಲು ನಾಂದಿ ಹಾಡಿದವರು ಪೂಜ್ಯ ಶ್ರೀ ಅಟವೀ ಸ್ವಾಮಿಗಳು ಹಾಗೂ ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳು. ಚಿಕ್ಕ


ಶ್ರೀ ಅಟವೀ ಸ್ವಾಮಿಗಳು


ಶ್ರೀ ಉದ್ಧಾನ ಶಿವಯೋಗಿಗಳು

ಪ್ರಮಾಣದಲ್ಲಿ ಪ್ರಾರಂಭವಾದ ಅನ್ನ ದಾಸೋಹ ಹಾಗೂ ಶಿಕ್ಷಣ ದಾಸೋಹ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನಿರಂತರ ಶ್ರಮದಿಂದ ಇಡೀ ದೇಶದ ಗಮನವನ್ನು ಸೆಳೆಯುವ ಶಿಕ್ಷಣ ಸಂಸ್ಥೆಯಾಗಿ, ಆಧ್ಯಾತ್ಮಿಕ ತಪೋಭೂಮಿಯಾಗಿ, ಹಸಿದು ಬಂದವರಿಗೆ ಅನ್ನ ನೀಡುವ ಮಹಾದಾಸೋಹ ಕೇಂದ್ರವಾಗಿದೆ. ಬಡವ, ಹಿಂದುಳಿದ, ದೀನ ದಲಿತರ ಮಕ್ಕಳಿಗೆ ಉಚಿತವಾಗಿ ಶಿಕ್ಷಣ ನೀಡುವ; ಅವರ ಭವ್ಯ ಭವಿಷ್ಯವನ್ನು ರೂಪಿಸುವ ಕಮ್ಮಟವಾಗಿದೆ.

ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಎಲ್ಲರಿಗೂ ಶಿಕ್ಷಣ ಸೌಲಭ್ಯ ದೊರೆಯಬೇಕು; ಸೂಕ್ತ ಅವಕಾಶವಿಲ್ಲದೆ ಯಾರೊಬ್ಬರೂ ವಿದ್ಯೆಯಿಂದ ವಂಚಿತರಾಗಬಾರದೆಂಬುದು ಅವರ ಹೆಬ್ಬಯಕೆ. ಕನಿಷ್ಠ ಪ್ರಾಥಮಿಕ ಶಿಕ್ಷಣದಿಂದ ಪ್ರೌಢ ಶಿಕ್ಷಣದವರಿಗಾದರೂ ಅವರಿಗೆ ಶಿಕ್ಷಣ ಪಡೆಯುವ ಅವಕಾಶ ಕಲ್ಪಿಸಬೇಕೆಂಬ ಉದ್ದೇಶದಿಂದ ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಗಳನ್ನು ಪ್ರಾರಂಭಿಸಿ ಗ್ರಾಮೀಣ ಮಕ್ಕಳಿಗೆ ಶಿಕ್ಷಣ ಪಡೆಯುವ ಅವಕಾಶವನ್ನು ಕಲ್ಪಿಸಿಕೊಡುತ್ತಾ ಬಂದಿದ್ದಾರೆ. ಶ್ರೀಮಠದ ಸೌಲಭ್ಯವನ್ನು ಪಡೆದ ಗ್ರಾಮೀಣ ಪ್ರದೇಶದ ಲಕ್ಷಾಂತರ ವಿದ್ಯಾರ್ಥಿಗಳು ತಮ್ಮ ಭವಿಷ್ಯವನ್ನು ರೂಪಿಸಿಕೊಂಡಿದ್ದಾರೆ.

ಪೂಜ್ಯ ಶ್ರೀ ಉದ್ಧಾನ ಶಿವಯೋಗಿಗಳು ೧೯೧೭ರಲ್ಲಿ ಶ್ರೀಮಠದಲ್ಲಿ ಚಿಕ್ಕ ಪ್ರಮಾಣದಲ್ಲಿ ಸ್ಥಾಪಿಸಿದ ವೇದ ಮತ್ತು ಸಂಸ್ಕೃತ ಪಾಠಶಾಲೆ ಇಂದು ಅವರ ಆಶೀರ್ವಾದ ಹಾಗೂ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಂಕಲ್ಪ ಹಾಗೂ ನಿಷ್ಕಾಮ ಸೇವೆಯಿಂದ ಹೆಮ್ಮರವಾಗಿ ಬೆಳೆದು ನಿಂತಿದೆ. ಪ್ರಾಥಮಿಕ ಪೂರ್ವಶಿಕ್ಷಣದಿಂದ ಹಿಡಿದು ಪದವಿ ಶಿಕ್ಷಣದವರಿಗೆ, ಶಿಕ್ಷಕರ ತರಬೇತಿ ಸಂಸ್ಥೆಗಳಿಂದ ಕೈಗಾರಿಕಾ ತರಬೇತಿ ಕೇಂದ್ರಗಳವರಿಗೆ, ತಾಂತ್ರಿಕ ಶಿಕ್ಷಣ ಸಂಸ್ಥೆ, ಪಾಲಿಟೆಕ್ನಿಕ್, ಫಾರ್ಮಸಿ ಕಾಲೇಜು, ವಾಣಿಜ್ಯ ಶಾಲೆ, ಸಂಸ್ಕೃತ ಪಾಠಶಾಲೆಗಳೂ ಸೇರಿದಂತೆ ೧೨೮ಕ್ಕೂ ಹೆಚ್ಚು ವಿವಿಧ ಕಾಲೇಜುಗಳು ಪರಮಪೂಜ್ಯ ಶ್ರೀಗಳವರ ಮಾರ್ಗದರ್ಶನದಲ್ಲಿ ನಡೆಯುತ್ತಿವೆ.

### ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ

ತುಮಕೂರಿನಲ್ಲಿರುವ ಶ್ರೀ ಸಿದ್ಧಗಂಗಾ ತಾಂತ್ರಿಕ ಶಿಕ್ಷಣ ಮಹಾವಿದ್ಯಾಲಯ ರಾಜ್ಯದ ಕೆಲವೇ ಪ್ರತಿಷ್ಠಿತ ತಾಂತ್ರಿಕ ಶಿಕ್ಷಣ ಕಾಲೇಜುಗಳಲ್ಲಿ ಒಂದಾಗಿದೆ. ಸುಸಜ್ಜಿತ ಕಟ್ಟಡ, ಉತ್ತಮ ಪ್ರಯೋಗ ಶಾಲೆ, ಗ್ರಂಥಭಂಡಾರ, ಅನುಭವಿ ಅಧ್ಯಾಪಕ ವರ್ಗದವರಿಂದ ಗುಣಮಟ್ಟದ ಶಿಕ್ಷಣ ಇವೇ ಮೊದಲಾದ ಸೌಲಭ್ಯಗಳಿಂದ ಕಾಲೇಜು ಮಾದರಿ ತಾಂತ್ರಿಕ ಶಿಕ್ಷಣ ಸಂಸ್ಥೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಪೂಜ್ಯ ಶ್ರೀಗಳವರ ಆಶೀರ್ವಾದ ಹಾಗೂ ತಾಂತ್ರಿಕ ಶಿಕ್ಷಣ ಕ್ಷೇತ್ರದಲ್ಲಿ ಅಪಾರವಾದ ಅನುಭವವನ್ನು ಹೊಂದಿರುವ ಸರಳತೆ ಮತ್ತು ಸಜ್ಜನಿಕೆಗೆ ಹೆಸರಾದ, ಶ್ರದ್ಧೆ, ಶಿಸ್ತು, ಪ್ರಾಮಾಣಿಕತೆಯನ್ನು ತಮ್ಮದಾಗಿಸಿಕೊಂಡಿರುವ ಡಾ. ಎಂ.ಎನ್. ಚನ್ನಬಸಪ್ಪನವರ ನೇತೃತ್ವದಲ್ಲಿ ಪ್ರಗತಿ ಪಥದಲ್ಲಿ ಮುನ್ನಡೆಯುತ್ತಿದೆ.


ತಾಂತ್ರಿಕ ಶಿಕ್ಷಣ ಸಂಸ್ಥೆಯ ಆಡಳಿತ ವಿಭಾಗ

ಕಳೆದ ವರ್ಷದ ಅಂಕಿ ಅಂಶಗಳ ಪ್ರಕಾರ (೨೦೦೧-೨೦೦೨) ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಆಶ್ರಯದಲ್ಲಿ ನಡೆಯುತ್ತಿರುವ ೧೨೮ ವಿವಿಧ ಶಿಕ್ಷಣ ಕೇಂದ್ರಗಳಲ್ಲಿ ಒಟ್ಟು ೪೫,೧೫೪ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದಾರೆ.






ಪರಮಪೂಜ್ಯ
ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು

ವಿದ್ಯಾರ್ಥಿಗಳಿದ್ದಾರೆ. ಶ್ರೀ ಕ್ಷೇತ್ರದಲ್ಲಿರುವ ವಿದ್ಯಾರ್ಥಿಗಳನ್ನು ನೋಡಿದಾಗ ಇದೊಂದು ಪುಟ್ಟ ರಾಜ್ಯವೆಂಬಂತೆ ಭಾಸವಾಗುತ್ತದೆ.

### ಶ್ರೀ ಸಿದ್ಧಲಿಂಗೇಶ್ವರ ಉಚಿತ ವಿದ್ಯಾರ್ಥಿನಿಲಯ

ಮೇ ತಿಂಗಳು ಬಂತೆಂದರೆ ಪ್ರವೇಶದ ಪ್ರಕ್ರಿಯೆ ಪ್ರಾರಂಭವಾಗುತ್ತದೆ. ಮೇ ಕೊನೆಯ ವಾರಗಳಲ್ಲಿ ಮಠದ ಆವರಣ ದೂರದ ಊರುಗಳಿಂದ ಟ್ರಂಕುಗಳ ಸಮೇತ ಬಂದ ಪೋಷಕರು ವಿದ್ಯಾರ್ಥಿಗಳಿಂದ ತುಂಬಿರುತ್ತದೆ. ಪರಮ ಪೂಜ್ಯ ಶ್ರೀಗಳವರು ದಣಿವು ಆಯಾಸಗಳನ್ನು ಲೆಕ್ಕಿಸದೆ ಪ್ರತಿಯೊಬ್ಬರ ಅರ್ಜಿಗಳನ್ನು ಸಾವಧಾನದಿಂದ ಪರಿಶೀಲಿಸಿ ಅವರ ಕಷ್ಟಸುಖಗಳನ್ನು ವಿಚಾರಿಸಿ ಪ್ರವೇಶಕ್ಕೆ ಅನುಮತಿ ನೀಡುತ್ತಾರೆ. ಇಲ್ಲಿ ಪ್ರವೇಶಾವಕಾಶಕ್ಕೆ ಯಾವುದೇ ರೀತಿಯ ಮಾನದಂಡವನ್ನು ಅನುಸರಿಸುವುದಿಲ್ಲ. ಶಿಕ್ಷಣ ಸೌಲಭ್ಯದಿಂದ ಯಾರೂ ವಂಚಿತರಾಗಬಾರದೆಂಬ ಉದ್ದೇಶವನ್ನು ಹೊಂದಿರುವ ಶ್ರೀಗಳವರು ಅಂಕಗಳನಷ್ಟೇ ಪರಿಗಣಿಸುವುದಿಲ್ಲ. ನೂರಕ್ಕೆ ತೊಂಬತ್ತು ಅಂಕಗಳನ್ನು ಪಡೆದ ವಿದ್ಯಾರ್ಥಿಗಳಿಗೂ ಪ್ರವೇಶಾವಕಾಶ ನೀಡುತ್ತಾರೆ. ಅಂತೆಯೇ ನೂರಕ್ಕೆ ೩೫ ಅಂಕಗಳನ್ನು ಪಡೆದವರಿಗೂ ಅವಕಾಶ. ಇಲ್ಲಿ ಎಲ್ಲರಿಗೂ ಸಮಾನವಾದ ಮುಕ್ತ ಅವಕಾಶ.

ಕಳೆದ ವಾರ ಶ್ರೀಮಠಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಶ್ರೀಮಠದ ಆವರಣದಲ್ಲಿ ವಿದ್ಯಾರ್ಥಿಗಳು, ಪೋಷಕರು ತುಂಬಿದ್ದರು. ಕೆಲವರಿಗೆ ಸೀಟು ದೊರೆತು ತಾವು ಬಂದ ಕೆಲಸವಾಯಿತಲ್ಲಾ ಎಂದು ಸಂತೋಷಪಡುತ್ತಿದ್ದಾರೆ. ಮತ್ತೆ ಕೆಲವರು ಅರ್ಜಿಗಳನ್ನು ಕೈಯಲ್ಲಿ ಹಿಡಿದು ಸೀಟಿಗಾಗಿ ಕಾತುರದಿಂದ ಕಾಯುತ್ತ ನಿಂತಿದ್ದರು. ಅವರಲ್ಲಿ ಕೆಲವರನ್ನು 'ಸಿದ್ಧಗಂಗಾ' ಪತ್ರಿಕೆಗಾಗಿ ಮಾತನಾಡಿಸಿ ಅವರ ಅಭಿಪ್ರಾಯಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ಪರಿಚಯ ಮಾಡಿಕೊಡಲಾಗಿದೆ.

ಬಳ್ಳಾರಿ ಜಿಲ್ಲೆ ಶಿರವಾರ ಗ್ರಾಮದಿಂದ ಬಂದಿದ್ದ ವ್ಯವಸಾಯಗಾರರಾದ ಶ್ರೀ ಹಗರಿ ಬಸಪ್ಪ ಅವರಿಗೆ ನಾಲ್ಕು ಜನ ಮಕ್ಕಳಲ್ಲಿ ಮೂರು ಗಂಡು, ಒಂದು ಹೆಣ್ಣು. ಹಿರಿಯ ಮಗ ವ್ಯವಸಾಯದಲ್ಲಿ ತಂದೆಗೆ ನೆರವಾಗುತ್ತಿದ್ದಾನೆ. ಒಬ್ಬ ಇಲ್ಲಿಯೇ ವ್ಯಾಸಂಗ ಮಾಡುತ್ತಿದ್ದಾನೆ. ಜಾತಿಯಲ್ಲಿ ವೀರಶೈವ.

### ಸರ್ವಧರ್ಮ ಸಮನ್ವಯ

ಮಹಾಮಾನವತಾವಾದಿ, ವಿಶ್ವವಿಭೂತಿ ಪುರುಷ, ಸಾಮಾಜಿಕ ಕ್ರಾಂತಿಯ ಹರಿಕಾರ ಜಗಜ್ಯೋತಿ ಬಸವಣ್ಣನವರ ತತ್ವ ಹಾಗೂ ಆದರ್ಶಗಳ ಮುಂಬೆಳಕಿನಲ್ಲಿ ನಡೆಯುತ್ತಿರುವ ಶ್ರೀಕ್ಷೇತ್ರ ಕರ್ತಾರನ ಕಮ್ಮಟವಾಗಿದೆ. ಜಾತಿ, ಮತ, ಧರ್ಮ ಭೇದವಿಲ್ಲದೆ ೭೦೦೦ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಅವಕಾಶವನ್ನು ಕಲ್ಪಿಸಿ ಕೊಟ್ಟಿರುವ ಪರಮ ಪೂಜ್ಯ ಶ್ರೀಶ್ರೀಗಳವರು ಶ್ರೀ ಕ್ಷೇತ್ರವನ್ನು ಸರ್ವಧರ್ಮ ಸಮನ್ವಯದ ಬೀಡನ್ನಾಗಿ ಮಾಡಿದ್ದಾರೆ. ಸರ್ವಧರ್ಮ ಸಮನ್ವಯಕ್ಕೆ ಮತ್ತೊಂದು ಹೆಸರು ಶ್ರೀ ಸಿದ್ಧಗಂಗಾ ಕ್ಷೇತ್ರ ಎಂಬ ಮಾತು ಲೋಕವಿಖ್ಯಾತವಾಗಿದೆ.

ತುಮಕೂರು, ಬೆಂಗಳೂರು ಜಿಲ್ಲೆಗಳಿಂದಲ್ಲದೆ ದೂರದ ಬೀದರ್, ಗುಲಬರ್ಗಾ, ರಾಯಚೂರು, ಧಾರವಾಡ, ದಾವಣಗೆರೆ, ಮೈಸೂರು, ಬೆಳಗಾವಿ, ಬಾಗಲ ಕೋಟೆ, ವಿಜಾಪುರ, ಬಳ್ಳಾರಿ, ಕಾರವಾರ, ಮಂಗಳೂರು, ಚಿಕ್ಕಮಗಳೂರು ಜಿಲ್ಲೆಗಳೂ ಸೇರಿದಂತೆ ನಾಡಿನ ವಿವಿಧ ಭಾಗಗಳಿಂದ ಬಂದ ವಿವಿಧ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳು ಶ್ರೀಕ್ಷೇತ್ರದಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಅಲ್ಲದೆ ನೆರೆ ರಾಜ್ಯಗಳಾದ ಆಂಧ್ರ, ತಮಿಳುನಾಡಿನಿಂದರೂ ಬಂದ


ಶ್ರೀ ಸಿದ್ಧಗಂಗಾ ತಾಂತ್ರಿಕ ಕಾಲೇಜಿನ ಸುಸಜ್ಜಿತ ಗ್ರಂಥಾಲಯ

## ಶ್ರೀಮಠದಲ್ಲಿ ವಿದ್ಯಾರ್ಥಿಗಳ ಪ್ರವೇಶ ಪ್ರಕ್ರಿಯೆ – ಒಂದು ನೋಟ



ಪ್ರವೇಶ ಬಯಸಿ ಮಕ್ಕಳೊಂದಿಗೆ ಬರುತ್ತಿರುವ ಪೋಷಕರು



ಶ್ರೀ ನರಸಪ್ಪ ಮಗ ಹುಸೇನಪ್ಪನೊಂದಿಗೆ



ಶ್ರೀ ಹಗರಿ ಬಸಪ್ಪ ಮಗನೊಂದಿಗೆ







ಶ್ರೀ ಸಂಗಪ್ಪ ಮುತ್ತಪ್ಪ ಕುಂಬಾರ ಮೊಮ್ಮಗನೊಂದಿಗೆ



ಶ್ರೀ ಅಮರಪ್ಪ ಬಾವಿಕಟ್ಟೆ ಮಕ್ಕಳಾದ ಶರಣಬಸಪ್ಪ ಮತ್ತು ಗಂಗಪ್ಪನೊಂದಿಗೆ



ಶ್ರೀ ಕುಮಾರ ದಂಪತಿಗಳು ಮಕ್ಕಳಾದ ಕಾರ್ತೀಕ್ ಮತ್ತು ಕಾಂತರಾಜುನೊಂದಿಗೆ



ಶ್ರೀಮತಿ ಜಯಮ್ಮ ಮಗ ಮಹೇಂದ್ರನೊಂದಿಗೆ

## ಶ್ರೀ ಸಿದ್ಧಲಿಂಗೇಶ್ವರ ಉಚಿತ ವಿದ್ಯಾರ್ಥಿನಿಲಯ, ೨೦೦೧-೨೦೦೨ನೇ ಸಾಲಿನ ಜಿಲ್ಲಾವಾರು ಅಂಕಿ ಅಂಶಗಳು

| ಕ್ರ.ಸಂ. | ಜಿಲ್ಲೆಗಳ ಹೆಸರು | ವಿದ್ಯಾರ್ಥಿಗಳು |
|---|---|---|
| ೧. | ಬೆಂಗಳೂರು ನಗರ | ೨೯೬ |
| ೨. | ಬೆಂಗಳೂರು ಗ್ರಾಮಾಂತರ | ೪೫೮ |
| ೩. | ಬೀದರ್ | ೧೬೭ |
| ೪. | ಬಿಜಾಪುರ | ೧೦೫ |
| ೫. | ಬಳ್ಳಾರಿ | ೧೪೩೫ |
| ೬. | ಬೆಳಗಾಂ | ೨೭ |
| ೭. | ಬಾಗಲಕೋಟೆ | ೧೦೪ |
| ೮. | ಚಿತ್ರದುರ್ಗ | ೨೧೫ |
| ೯. | ಚಿಕ್ಕಮಗಳೂರು | ೧೬೪ |
| ೧೦. | ಚಾಮರಾಜನಗರ | ೧೦೩ |
| ೧೧. | ದಾವಣಗೆರೆ | ೨೦೧ |
| ೧೨. | ಧಾರವಾಡ | ೯೬ |
| ೧೩. | ಗದಗ್ | ೯೬ |
| ೧೪. | ಗುಲಬರ್ಗಾ | ೩೯೦ |
| ೧೫. | ಹಾಸನ | ೩೧೮ |
| ೧೬. | ಹಾವೇರಿ | ೧೮೮ |
| ೧೭. | ಕೊಡಗು | ೨೪ |
| ೧೮. | ಕೋಲಾರ | ೨೪೭ |
| ೧೯. | ಕೊಪ್ಪಳ | ೨೮೬ |
| ೨೦. | ಮಂಡ್ಯ | ೧೦೭ |
| ೨೧. | ಮಂಗಳೂರು | ೦೧ |
| ೨೨. | ಮೈಸೂರು | ೧೧೧ |
| ೨೩. | ರಾಯಚೂರು | ೫೭೫ |
| ೨೪. | ಶಿವಮೊಗ್ಗ | ೬೮ |
| ೨೫. | ತುಮಕೂರು | ೪೪೦ |
| ೨೬. | ಉತ್ತರ ಕನ್ನಡ | ೦೮ |
| ೨೭. | ಆಂಧ್ರಪ್ರದೇಶ | ೮೪ |
| ೨೮. | ತಮಿಳುನಾಡು | ೦೯ |
| | ಒಟ್ಟು | ೬೩೮೦ |

ಬಳ್ಳಾರಿಯಲ್ಲಿಯೇ ಅನೇಕ ಶಾಲೆಗಳಿವೆ. ಅಲ್ಲಿಯೇ ಯಾವುದಾದರೂ ಶಾಲೆಗೆ ಸೇರಿಸಬುದಾಗಿತ್ತಲ್ಲಾ ಎಂದು ಕೇಳಿದಾಗ ಶ್ರೀ ಹಗರಿ ಬಸಪ್ಪನವರು ಕೊಟ್ಟ ಉತ್ತರ, ''ನಗರ ಪ್ರದೇಶದಲ್ಲಿ ಸೇರಿಸಿದರೆ ಹುಡುಗರು ಶೋಕಿ ಮಾಡೋಕೆ ಶುರುಮಾಡುತ್ತಾರೆ. ಅಂಥವರ ಸಹವಾಸ ಮಾಡಿ ನನ್ನ ಮಗನು ಹಾಳಾಗುತ್ತಾನೆ ಎಂಬ ಭಯ. ಜೊತೆಗೆ ನಮ್ಮ ಆರ್ಥಿಕ ಸ್ಥಿತಿಯೂ ಉತ್ತಮವಾಗಿಲ್ಲ. ಬಿತ್ತಿದ ಬೆಳೆ ಕೈಗೆ ಬಂದರೆ ಜೀವನ, ಓದ್ನೋಕೆ ಕಷ್ಟವಾಗಿ ಇಲ್ಲಿ ಸೇರಿಸಲು ಬಂದೆ'' ಎಂದು ಹೇಳುವ ಶ್ರೀ ಬಸಪ್ಪ ಇಲ್ಲಿ ಸೇರಿಸೋಕೇ ಮತ್ತೊಂದು ಕಾರಣ ''ಇಲ್ಲಿ ನನ್ನ ಮಗ ಶಿಕ್ಷಣ ಪಡೆಯುವುದರ ಜೊತೆಗೆ ಶಿಸ್ತು ಕಲಿಯುತ್ತಾನೆ. ನಮ್ಮ ಆಚಾರ-ವಿಚಾರಗಳನ್ನು ಅರ್ಥಮಾಡಿಕೊಳ್ಳಲು ಇಲ್ಲಿ ಒಳ್ಳೆಯ ಅವಕಾಶವಿದೆ'' ಎಂದು ತಮ್ಮ ಭಾವನೆಗಳನ್ನು ಹಂಚಿಕೊಂಡರು.

ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ, ಗೋರ್ಕಲ್ ಗ್ರಾಮದ ಕುರುಬ ಜನಾಂಗಕ್ಕೆ ಸೇರಿದ ಶ್ರೀ ನರಸಪ್ಪ ಅವರು ತನ್ನ ಮಗ ಹುಸೇನಪ್ಪನನ್ನು ಎಂಟನೆ ತರಗತಿಗೆ ಸೇರಿಸಲು ಬಂದಿದ್ದರು. ಹುಡುಗ ಏಳನೆ ತರಗತಿಯಲ್ಲಿ ಶೇಕಡ ೪೩ ಅಂಕಗಳನ್ನು ಗಳಿಸಿದ್ದಾನೆ. ಶ್ರೀ ನರನಸಪ್ಪನಿಗೆ ಆರು ಜನ ಮಕ್ಕಳು. ಕಿತ್ತು ತಿನ್ನುವ ಬಡತನ. ಆರು ಜನ ಮಕ್ಕಳಲ್ಲಿ ಮೂರು ಹೆಣ್ಣು; ಮೂರು ಗಂಡು. ಮೊದಲ ಇಬ್ಬರು ಗಂಡು ಮಕ್ಕಳನ್ನು ಓದಿಸಲು ಸಾಧ್ಯವಾಗದೆ ಕೂಲಿ ಕೆಲಸಕ್ಕೆ ಕಳುಹಿಸುತ್ತಿದ್ದಾರೆ. ಬಡತನದಿಂದ ಅವರಿಬ್ಬರನ್ನು ಓದಿಸಲು ಸಾಧ್ಯವಾಗಲಿಲ್ಲ ಎಂಬ ನೋವನ್ನು ವ್ಯಕ್ತಪಡಿಸಿದ ಶ್ರೀ ನರಸಪ್ಪ ಇವನನ್ನಾದರೂ ಓದಿಸಬೇಕೆಂಬ ಬಯಕೆ ಚಿಗುರೊಡೆದುದು ಶ್ರೀಮಠದ ಹೆಸರು ಕೇಳಿದಾಗ. ಅದೇ ಊರಿನ ಇಬ್ಬರು ಹುಡುಗರು ಶ್ರೀ ಕ್ಷೇತ್ರದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಆ ಹುಡುಗರಿಂದ, ಅವರ ಪೋಷಕರಿಂದ ವಿಚಾರ ತಿಳಿದುಕೊಂಡು ಶ್ರೀಮಠಕ್ಕೆ ಕರೆದುಕೊಂಡು ಬಂದಿರುವ ವಿಷಯ ತಿಳಿಸಿದರು. ''ಬುದ್ಯೋರ ಕೃಪೆಯಿಂದ ಮಗನಿಗೆ ಸೀಟು ಸಿಕ್ಕಿದೆ. ಬಿಟ್ಟು ಹೋಗೋಣ ಎಂದು ಕರೆದುಕೊಂಡು ಬಂದೆ'' ಎಂದು ಹೇಳುವಾಗ ಅವರ ಮುಖ ಸೂರ್ಯನ ದರ್ಶನದಿಂದ ನೈದಿಲೆ ಹೂ ಅರಳುವಂತೆ ಅರಳಿತು.

ಬಾಗಲಕೋಟೆ ತಾಲ್ಲೂಕು ಸಿಟಿಮನಿ ಆಲೂರಿನಿಂದ ಬಂದಿದ್ದ ಶ್ರೀ ಬಸಪ್ಪ ಅವರು ತನ್ನ ಮಗ ವಿಠಲ ಬಸಪ್ಪ ಮೇಟಿಯನ್ನು ೫ನೇ ತರಗತಿಗೆ ಸೇರಿಸಲು ಜೊತೆಯಲ್ಲಿಯೆ ಕರೆದುಕೊಂಡು ಬಂದಿದ್ದರು. ಅವರನ್ನು ಮಾತನಾಡಿಸಿದಾಗ ''ಸಾಹೇಬ್ರೆ, ನನಗೆ ಇಬ್ಬರು ಗಂಡು ಮಕ್ಕಳು. ದೊಡ್ಡವನನ್ನು ಓದಿಸಲು ಆಗದೆ ಕೂಲಿ ಕೆಲ್ಸಕ್ಕೆ ಹಚ್ಚಿದ್ದೀನಿ. ಇತ್ತೀಚೆಗೆ ನಮ್ಮ ಜನ (ಕುರುಬರು) ಹುಡುಗರನ್ನು ಓದೋಕೆ ಹಚ್ಚವರ್ರಿ. ನಂಗೂ ಓದಿಸಬೇಕು ಅಂತ ಆಸೆ, ಆದ್ರೆ ಏನೂ ಮಾಡೋದ್ರಿ ಕೂಲಿ ಕೆಲ್ಸದಾಗೆ ಹೊಟ್ಟೆ ಹೊರೆಯೋದೆ ಕಷ್ಟ, ಅಂತದ್ರಾಗೆ ಓದ್ಸೋದು ಹೆಂಗ್ರಿ, ನಮ್ಮೂರು ನೀರಿನಲ್ಲಿ ಮುಳುಗಡೆ ಆಗೈತೆ. ನಮ್ಮ ಪರಿಚಯದೋರ ಮಕ್ಕಳು ಇಲ್ಲಿ ಓದ್ತಾ ಅವ್ರೆ, ಇಲ್ಲಿ ಎಲ್ಲ ಛಲೋ ಐತೆ ಅಂತೆ ಕೇಳಿ ಸ್ವಾಮ್ಯಾರೆಗೆ ನಮ್ಮ ಹುಡುಗನ್ನು ಒಪ್ಸಿ ಹೋಗೋಣಾಂತ ಕರಕ್ಕೊಂಡು ಬಂದೀನ್ರಿ, ಸ್ವಾಮ್ಯಾರು ನನ್ನ ಕಷ್ಟ ಕೇಳಿ ಸೀಟು ಕೊಟ್ಟವರ್ರಿ. ಇಂದ್ರಿಂದ ನನ್ನ ಮನ್ಸಿಗೆ ಆನಂದ ಆಗೈತ್ರಿ'' ಎಂದು ತನ್ನ ಭಾವನೆಗಳನ್ನು ವ್ಯಕ್ತಪಡಿಸಿದರು.



ವಜ್ರ ಮಹೋತ್ಸವದ ನೆನಪಿನ ವಿದ್ಯಾರ್ಥಿನಿಲಯ

ದಾವಣಗೆರೆ ತಾಲ್ಲೂಕು ಕಾರಿಗನೂರಿನಿಂದ ಟ್ರಂಕ್ ಸಮೇತ ತನ್ನ ಪುಟ್ಟ ಮಗ ಬಿ.ವಿ. ಪ್ರಮೋದನನ್ನು ಕರೆದುಕೊಂಡು ಬರುತ್ತಿದ್ದ ಶ್ರೀಮತಿ ಶರಾವತಿ ಅವರನ್ನು ಮಾತನಾಡಿಸಿ, ಇಷ್ಟು ಚಿಕ್ಕ ಹುಡುಗನನ್ನು ತಂದು ಸೇರಿಸಲು ನಿಮ್ಮ ಮನಸ್ಸಿಗೆ ನೋವಾಗುವುದಿಲ್ಲವೆ? ನಿಮ್ಮ ಊರಿನಲ್ಲಿಯೇ ಸೇರಿಸಬಹುದಾಗಿತಲ್ಲಾ ಎಂದು ಪ್ರಶ್ನಿಸಿದಾಗ ಅದಕ್ಕೆ ಅವರು ''ಮಕ್ಕಳು ಕಷ್ಟದಲ್ಲಿ ಬೆಳೆಯಬೇಕು ಆಗಲೇ ಅವರಿಗೆ ಕಷ್ಟದ ಅನುಭವವಾಗೋದು, ನಾಳೆ ನಮ್ಮ ಮಕ್ಕಳ ಭವಿಷ್ಯ ಒಳ್ಳೆಯದಾಗಬೇಕಾದರೆ ನಾವು ತ್ಯಾಗ ಮಾಡಲೇಬೇಕು, ಇಲ್ಲಿ ಒಳ್ಳೆಯ ಪರಿಸರವಿದೆ. ನಮ್ಮ ಸಂಸ್ಕೃತಿ ಆಚಾರವನ್ನು ಕಲಿಯಲು ಅವಕಾಶವಿದೆ. ನಮ್ಮ ಮಕ್ಕಳು ಒಳ್ಳೆಯ ವಾತಾವರಣದಲ್ಲಿ ಬೆಳೆಸಬೇಕು ಎನ್ನುವ ಆಸೆಯಿಂದ ಕರೆದುಕೊಂಡು ಬಂದಿದ್ದೇನೆ' ಎಂದರು. ಶ್ರೀಮತಿ ಶರಾವತಿ ಅವರು ವೀರಶೈವ ಜನಾಂಗಕ್ಕೆ ಸೇರಿದವರು. ಮೂರು ಜನ ಗಂಡು ಮಕ್ಕಳು. ಅವರ ಯಜಮಾನರು ದಾವಣಗೆರೆಯಲ್ಲಿ ಬಸ್ ಏಜೆಂಟ್ ಆಗಿ ಕೆಲಸ ಮಾಡುತ್ತಿದ್ದಾರೆ. ಮೊದಲ ಇಬ್ಬರು ಮಕ್ಕಳಾದ ಬಿ.ವಿ. ಪವನ್, ಮತ್ತು ಬಿ.ವಿ. ಪ್ರತಾಪ್ ಶ್ರೀಮಠದಲ್ಲಿಯೇ ೯ ಮತ್ತು ೭ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ.

ತಮ್ಮ ಮೂರು ಜನ ಮಕ್ಕಳನ್ನೂ ಕರೆದುಕೊಂಡು ಬಂದು ಸೇರಿಸಲು ಮುಖ್ಯ ಕಾರಣ ''ಇಲ್ಲಿ ಓದಿದ ಮಕ್ಕಳು ಸನ್ನಡೆಯುಳ್ಳವರಾಗುತ್ತಾರೆ ಸಂಸ್ಕೃತವಂತರಾಗುತ್ತಾರೆ ಎಂಬ ಭಾವನೆಯಿಂದ ಸೇರಿಸುತ್ತಿದ್ದೇವೆ'' ಎಂದು ತಿಳಿಸಿದಾಗ ಅವರ ಮಾತು ಅಕ್ಷರಶಃ ಸತ್ಯ ಎನಿಸಿತು.

ವೃತ್ತಿಯಲ್ಲಿ ವ್ಯವಸಾಯಗಾರರಾದ ಶ್ರೀ ಅಮರಪ್ಪ ಬಾವಿಕಟ್ಟಿ ಅವರು ಬಿಜಾಪುರ ಜಿಲ್ಲೆ ನಾಲಿತವಾಡ ಗ್ರಾಮದವರು. ತಮ್ಮ ಮಗ ಗಂಗಪ್ಪನನ್ನು ಐದನೇ ತರಗತಿಗೆ ಸೇರಿಸಲು ಬಂದಿದ್ದರು. ಅವರ ಮೊದಲ ಮಗ ಶರಣಬಸಪ್ಪ ಶ್ರೀ ಕ್ಷೇತ್ರದಲ್ಲಿಯೇ ವ್ಯಾಸಂಗ ಮಾಡುತ್ತಿದ್ದು ಈ ವರ್ಷ ಎಂಟನೆ ತರಗತಿಗೆ ದಾಖಲಾಗಿದ್ದಾನೆ.

ಹಿಂದೆ ಇಲ್ಲಿ ಓದಿದ ವಿದ್ಯಾರ್ಥಿಗಳಿಂದ ಶ್ರೀಮಠದ ವಿಚಾರ ತಿಳಿದು, ಮಕ್ಕಳನ್ನು ಸೇರಿಸಿದೆ ಎಂದು ಹೇಳುವ ಅಮರಪ್ಪ, 'ದೂರ' ಎಂಬುದನ್ನು ಬಿಟ್ಟರೆ ಇಲ್ಲಿ ಎಲ್ಲಾ ಅನುಕೂಲವೂ ಇದೆ. ನಮಗೆ ಯಾವುದೇ ಭಯವಿಲ್ಲ. ಹುಡುಗರು ಒಳ್ಳೆಯ ವಾತಾವರಣದಲ್ಲಿ ಬೆಳೆಯುತ್ತಾರೆ ಎಂಬ ನಂಬಿಕೆ ಇದೆ' ಎಂದು ತಿಳಿಸಿದರು.

ಮದ್ದೂರು ತಾಲ್ಲೂಕು ಹೊಸೂರು ಗ್ರಾಮದಿಂದ ಬಂದಿದ್ದ ಶ್ರೀಮತಿ ಜಯಮ್ಮ ಒಕ್ಕಲಿಗ ಜಾತಿಗೆ ಸೇರಿದವರು. ಇರುವ ತುಂಡು ಜಮೀನಿನಲ್ಲಿ ವ್ಯವಸಾಯ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಒಬ್ಬನೆ ಮಗ ಮಹೇಂದ್ರ. ೫ನೇ ತರಗತಿಗೆ ಸೇರಿಸಲು ಕರೆದುಕೊಂಡು ಬಂದಿದ್ದರು. ಮುಂದೆ ಮಗನನ್ನು ಓದಿಸಲು ಆರ್ಥಿಕ ಮುಗ್ಗಟ್ಟು. ತಂದೆ ತಾಯಿಗಳಿಬ್ಬರು ಅನಕ್ಷರಸ್ಥರು. ತಮಗೆ ಇರುವ ಒಬ್ಬ ಮಗನಾದರೂ ನಾಲ್ಕು ಅಕ್ಷರ ಕಲಿತು ವಿದ್ಯಾವಂತನಾಗಲಿ ಎಂಬದು ಅವರ ಆಸೆ. ನಾಲ್ಕನೆ ತರಗತಿ ಮುಗಿಸಿದ ನಂತರ ಮುಂದೆ ಏನು ಮಾಡಬೇಕು ಎಂದು ಯೋಚಿಸುತ್ತಿರುವಾಗ ಪರಿಚಯದವರು 'ಸಿದ್ಧಗಂಗಾ ಮಠ' ಇರುವಾಗ ಏಕೆ ಯೋಚನೆ ಮಾಡುತ್ತೀರಿ; ಕರೆದುಕೊಂಡು ಹೋಗಿ ಸ್ವಾಮಿಗಳವರ ಪಾದಕ್ಕೆ ಒಪ್ಪಿಸಿ ಬನ್ನಿ ಎಂದು ಹೇಳಿದರು. ಅವರ ಮಾತಿನಿಂದ ನಮಗೆ ದೊಡ್ಡನಿಧಿ ದೊರೆತಂತಾಯಿತು. ಕಳೆದ ತಿಂಗಳು ಬಂದು ಅರ್ಜಿ ತೆಗೆದುಕೊಂಡು ತುಂಬಿಸಿ ಕೊಟ್ಟಿದ್ದೆ. ಸೀಟು ಸಿಕ್ಕಿದೆ. ಮಗನನ್ನು ಶಾಲೆಗೆ ಸೇರಿಸಿ ಮಠಕ್ಕೆ ಬಿಟ್ಟು ಹೋಗಲು ಬಂದೆ' ಎಂದು ಹೇಳಿದ ಶ್ರೀಮತಿ ಜಯಮ್ಮ ''ನಾವಾದರೂ ಓದಲಿಲ್ಲ. ಇರುವ ಒಬ್ಬ ಮಗನ ಭವಿಷ್ಯವನ್ನು ಏಕೆ



ವಜ್ರಮಹೋತ್ಸವ ನೆನಪಿನ ದಾಸೋಹಮಂದಿರದಲ್ಲಿ ಮಕ್ಕಳು ಪ್ರಸಾದ ಸ್ವೀಕರಿಸುತ್ತಿರುವುದು

| ಕ್ರ.ಸಂ. | ಜಿಲ್ಲೆಗಳ ಹೆಸರು | ಒಟ್ಟು ವಿದ್ಯಾರ್ಥಿಗಳು |
|---|---|---|
| ವರ್ಗ – ೧ | | |
| ೧. | ಹೆಳವ | ೦೪ |
| ೨. | ಬೆಸ್ತ | ೨೪ |
| ೩. | ಅಂಬಿಗ | ೧೭ |
| ೪. | ಬರ್ಕಿ | ೨೧ |
| ೫. | ಗಂಗಾಮತ | ೧೮ |
| ೬. | ಜಲಗಾರ | ೦೦೧ |
| ೭. | ಕಬ್ಬಲಿಗ | ೩೮ |
| ೮. | ಕಬ್ಬೇರಾ | ೨೬ |
| ೯. | ಬುಡುಬುಡಿಕೆ | ೦೨ |
| ೧೦. | ಲಾಡರು | ೦೪ |
| ೧೧. | ಚಿತ್ರಗಾರ | ೦೨ |
| ೧೨. | ಉಪ್ಪಾರ | ೧೧೪ |
| ೧೩. | ವಾಸುದೇವ | ೦೨ |
| ೧೪. | ಗೊಂದಲಿ | ೦೬ |
| ೧೫. | ಬೇಡರು | ೧೯ |
| ೧೬. | ಗೊಲ್ಲಾ | ೧೭೬ |
| ೧೭. | ತಳವಾರ | ೦೭ |
| ೧೮. | ವಾಲ್ಮೀಕಿ | ೧೧೫ |
| ೧೯. | ವಡ್ಡರು | ೧೦ |
| ೨೦. | ಯಾದವ | ೦೨ |
| ವರ್ಗ – ೨ಎ | | |
| ೨೧. | ಆಗಸ | ೩೩ |
| ೨೨. | ಮಡಿವಾಳ | ೪೫ |
| ೨೩. | ಡೋಬಿ | ೦೨ |
| ೨೪. | ಈಡಿಗ | ೨೭ |
| ೨೫. | ನಾಮಧಾರಿ | ೦೨ |
| ೨೬. | ಕುಂಬಾರ | ೫೧ |
| ೨೭. | ಕುರುಬ | ೭೧೬ |
| ೨೮. | ನಾಯಿಂದ | ೦೨ |
| ೨೯. | ಕ್ಷೌರಿಕ | ೦೨ |
| ೩೦. | ಭಜಂತ್ರಿ | ೨೦ |
| ೩೧. | ಹಡಪದ | ೧೮ |
| ೩೨. | ಹಜಾಮ | ೦೪ |
| ೩೩. | ತಿಗಳ | ೧೫ |
| ೩೪. | ವಹ್ನೀಕುಲ | ೦೪ |
| ೩೫. | ವಿಶ್ವಕರ್ಮ | ೬೯ |
| ೩೬. | ಆಚಾರಿ | ೦೧ |
| ೩೭. | ಅಕ್ಕಸಾಲಿಗ | ೦೭ |
| ೩೮. | ಕಮ್ಮಾರ | ೦೪ |
| ೩೯. | ಪಾಂಚಾಲ | ೧೩ |

| ಕ್ರ.ಸಂ. | ಜಿಲ್ಲೆಗಳ ಹೆಸರು | ಒಟ್ಟು ವಿದ್ಯಾರ್ಥಿಗಳು |
|---|---|---|
| ೪೦. | ಹೂಗಾರ | ೧೨ |
| ೪೧. | ಮಾಲಗಾರ | ೦೨ |
| ೪೨. | ಹಂಡೆವಜೀರ | ೦೫ |
| ೪೩. | ಪುಲಾರಿ | ೦೨ |
| ೪೪. | ಜೀರಾ | ೦೨ |
| ೪೫. | ಭಾವಸಾರ ಕ್ಷತ್ರೀಯ | ೧೪ |
| ೪೬. | ಹಟಗಾರ | ೦೪ |
| ೪೭. | ದೇವಾಂಗ | ೬೬ |
| ೪೮. | ಕುರುಹಿನಶೆಟ್ಟಿ | ೧೭ |
| ೪೯. | ಬಿಲಿಮೊಗ್ಗ | ೦೪ |
| ೫೦. | ತೊಗಟ | ೦೩ |
| ೫೧. | ಪದ್ಮಶಾಲೀ | ೨೦ |
| ೫೨. | ನೇಕಾರ | ೧೫ |
| ೫೩. | ಸೋಮವಂಶ ಕ್ಷತ್ರೀಯ | ೦೫ |
| ೫೪. | ಗಾಣಿಗ | ೮೮ |
| ೫೫. | ರಜಪೂತ | ೦೮ |
| ೫೬. | ಸಾದರು | ೦೫ |
| ೫೭. | ಜಟ್ಟಿ | ೦೧ |
| ೫೮. | ಕ್ಷತ್ರಿಯ | ೦೭ |
| ೫೯. | ಬಡಿಗೇರ | ೦೭ |
| ವರ್ಗ – ೨ಬಿ | | |
| ೬೦. | ಮುಸ್ಲಿಂ | ೬೭ |
| ವರ್ಗ – ೩ಎ | | |
| ೬೧. | ವಕ್ಕಲಿಗ | ೪೩೨ |
| ೬೨. | ಹಳ್ಳಿಕಾರ ವಕ್ಕಲಿಗ | ೦೧ |
| ೬೩. | ರೆಡ್ಡಿ | ೧೮೩ |
| ೬೪. | ಕುಂಚಿಟಿಗ | ೭೯ |
| ೬೫. | ಗೌಡ | ೧೪ |
| ೬೬. | ಕಾಪು | ೨೮ |
| ೬೭. | ಕಮ್ಮ | ೩೪ |
| ೬೮. | ಕೊಡವ | ೦೧ |
| ೬೯. | ಬಲಿಜ | ೧೧ |
| ೭೦. | ಬಣಜಿಗ | ೪೭ |
| ೭೧. | ನಾಯ್ಡು | ೧೪ |
| ೭೨. | ತೆಲುಗು ಗೌಡ | ೦೧ |
| ವರ್ಗ – ೩.ಬಿ | | |
| ೭೩. | ಲಿಂಗಾಯತ | ೨೮೬೦ |
| ೭೪. | ಮರಾಠ | ೩೭ |
| ೭೫. | ಕ್ರಿಶ್ಚಿಯನ್ | ೦೪ |
| ೭೬. | ಜೈನ್ | ೦೧ |
| ೭೭. | ವೈಷ್ಣವ | ೧೧ |



ಶಿಕ್ಷಣ

| ಕ್ರ.ಸಂ. | ಜಿಲ್ಲೆಗಳ ಹೆಸರು | ಒಟ್ಟು ವಿದ್ಯಾರ್ಥಿಗಳು |
|---|---|---|
| ಸಾಮಾನ್ಯ ವರ್ಗ | | |
| ೭೮. | ಮೊದಲಿಯರ್ | ೦೬ |
| ೭೯. | ಬ್ರಾಹ್ಮಣ | ೧೬ |
| ೮೦. | ವೈಶ್ಯ | ೩೬ |
| ೮೧. | ಅರಸ್ | ೦೪ |
| ವರ್ಗ – "ಎಸ್.ಸಿ." | | |
| ೮೨. | ಆದಿ ದ್ರಾವಿಡ | |
| ೮೩. | ಆದಿ ಕರ್ನಾಟಕ | ೮೫ |
| ೮೪. | ಲಂಬಾಣಿ | ೧೫ |
| ೮೫. | ಬೇಡ ಜನಾಂಗ | ೧೯ |
| ೮೬. | ಸಮಗಾರ | ೦೫ |
| ೮೭. | ಮೋಚಿ | ೦೫ |
| ೮೮. | ಮೇದ | ೦೩ |
| ೮೯. | ಭೋವಿ | ೭೮ |
| ೯೦. | ಚಲುವಾದಿ | ೧೫ |
| ೯೧. | ದೊಂಬರ | ೦೫ |
| ೯೨. | ಹಂದಿಜೋಗಿ | ೦೨ |
| ೯೩. | ಕೊರಚ | ೦೯ |
| ೯೪. | ಕೊರಮ | ೦೫ |
| ೯೫. | ಮಾದಿಗ | ೧೭ |
| ೯೬. | ಮಾಲಗಾರ | ೦೬ |
| ೯೭. | ಮುಲಸನ್ಯಾಸಿ | ೦೩ |
| ೯೮. | ಶಿಳ್ಳೇಕ್ಯಾತ | ೦೩ |
| ೯೯. | ತೋಟಿ | ೦೨ |
| ೧೦೦. | ಸುಡುಗಾಡು ಸಿದ್ಧ | ೦೨ |
| ವರ್ಗ – 'ಎಸ್‌ಟಿ' | | |
| ೧೦೧. | ಚೌದರಿ | ೦೮ |
| ೧೦೨. | ಗೊಂಡ | ೦೭ |
| ೧೦೩. | ಕಾಣಿಯಾರ | ೦೪ |
| ೧೦೪. | ತೊಕರಿಕೊಲಿ | ೦೧ |
| ೧೦೫. | ನಾಯಕ | ೨೩೭ |
| ವರ್ಗ | | |
| ೧. | | ೬೦೮ |
| ೨-ಎ | | ೧೩೨೨ |
| ೨-ಬಿ | | ೬೭ |
| ೩-ಎ | | ೮೪೭ |
| ೩-ಬಿ | | ೨೯೧೩ |
| ಜಿ.ಎಮ್ | | ೬೨ |
| ಎಸ್.ಸಿ. | | ೩೦೬ |
| ಎಸ್.ಟಿ. | | ೨೫೭ |
| | | ೬೩೮೦ |

ಇವರ ಜೊತೆಗೆ ಸಪ್ಲಿಮೆಂಟರಿ ಪರೀಕ್ಷೆಗೆ ಕುಳಿತ ೧೨೦೦ ವಿದ್ಯಾರ್ಥಿಗಳು ಶ್ರೀಮಠದಲ್ಲಿ ಆಶ್ರಯಪಡೆದಿದ್ದಾರೆ.



ಅಂಧ ಮಕ್ಕಳ ಪಾಠಶಾಲಾ ನೂತನ ಕಟ್ಟಡ

ಹಾಳುಮಾಡಬೇಕು, ಇಲ್ಲಿ ಯಾವುದೇ ಕೊರತೆಯಿಲ್ಲ. ನಾವೂ ಇಷ್ಟು ಚೆನ್ನಾಗಿ ನೋಡಿಕೊಳ್ಳಲು ಆಗುವುದಿಲ್ಲ. ಸಾವಿರಾರು ಮಕ್ಕಳ ಜೊತೆಯಲ್ಲಿ ನಮ್ಮ ಹುಡುಗನು ಬೆಳೆಯಲಿ'' ಎಂದು ಹೇಳುವಾಗ ಅವರ ಮುಖದಲ್ಲಿ ಧನ್ಯತೆಯ ಭಾವನೆಯನ್ನು ಕಾಣಬಹುದಾಗಿತ್ತು.

ಇಬ್ಬರು ಗಂಡು ಮಕ್ಕಳೊಂದಿಗೆ ಟ್ರಂಕ್ ಸಮೇತ ಬಂದಿದ್ದ ಶ್ರೀ ಕುಮಾರ್ ಮತ್ತು ಶ್ರೀಮತಿ ರುದ್ರಮ್ಮ ಶಿಕಾರಿಪುರ ತಾಲ್ಲೂಕು, ಹೊಸೂರು ಗ್ರಾಮದವರು. ವೀರಶೈವ ಮತಕ್ಕೆ ಸೇರಿದ ಇವರು. ಬಡತನವನ್ನೇ ಹಾಸಿ ಹೊದ್ದವರು. ಕೂಲಿ ಕೆಲಸದಿಂದ ಜೀವನ ನಿರ್ವಹಣೆ. ಕೂಲಿ ಸಿಗದ ದಿನ ಉಪವಾಸವೇ ಗತಿ ಎನ್ನುವ ಅವರಿಗೆ ನಿಲ್ಲಲು ನೆಲೆಯಿಲ್ಲ. ತಮಗೆ ಇರುವ ಇಬ್ಬರು ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಬೇಕೆಂಬ ಹಂಬಲ. ಮೊದಲನೆ ಮಗ ಕಾಂತರಾಜು ಶ್ರೀಮಠದಲ್ಲಿ ಆಶ್ರಯ ಪಡೆದು ಆರನೆ ತರಗತಿಯಲ್ಲಿ ಓದುತ್ತಿದ್ದಾನೆ. ಎರಡನೆ ಮಗ ಕಾರ್ತೀಕನನ್ನು ಮೂರನೆ ತರಗತಿಗೆ ಸೇರಿಸಲು ಕರೆದುಕೊಂಡು ಬಂದಿದ್ದರು. ಇಂಥ ಚಿಕ್ಕ ಹುಡುಗನನ್ನು ಬಿಡುವುದಕ್ಕೆ ನಿಮಗೆ ಹೇಗಾದರೂ ಮನಸ್ಸು ಬಂತು ಎಂದು ಕೇಳಿದ್ದಕ್ಕೆ ಆ ತಾಯಿ ಕೊಟ್ಟ ಉತ್ತರ ''ಸ್ವಾಮಿ ನಮ್ಮದು ಒಂದು ರೀತಿಯಲ್ಲಿ ಅಲೆಮಾರಿ ಜೀವನ. ಎಲ್ಲಿ ಕೂಲಿ ಸಿಗುತ್ತದೆಯೋ ಅದೇ ನಮ್ಮ ಊರು. ಹೀಗಿರುವಾಗ ಮಕ್ಕಳನ್ನು ಹೇಗೆ ಓದ್ಸೋದು. ನಮ್ಮ ಹುಡುಗನಂತಹವರು ಸಾವಿರಾರು ಜನ ಇಲ್ಲಿ ಇದ್ದಾರೆ. ಅವರಲ್ಲಿ ನಮ್ಮ ಮಗನೂ ಒಬ್ಬ. ಕಷ್ಟಪಟ್ಟಾಗಲೇ ವಿದ್ಯೆಯ ಬೆಲೆ ಗೊತ್ತಾಗೋದು. ನಮ್ಮ ಹುಡುಗರು ಒಳ್ಳೆಯ ಪರಿಸರದಲ್ಲಿ ಬೆಳೆಯಲಿ. ಈ ಮಠದಲ್ಲಿ ಯಾವುದೇ ಕೊರತೆಯಿಲ್ಲ. ಸ್ವಾಮಿಗಳು ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆ. ನಮ್ಮ ಮಕ್ಕಳಿಗೆ ಇಲ್ಲಿ ಓದಲು ಅವಕಾಶ ಸಿಕ್ಕಿರುವುದು ನಮ್ಮ ಪೂರ್ವಜನ್ಮದ ಪುಣ್ಯ'' ಎಂದು ಹೇಳುವಾಗ ಆಕೆಗೆ ತಮಗರಿವಿಲ್ಲದೆಯೇ ಆನಂದ ಭಾಷ್ಪ ಕಣ್ಣಂಚಿನಲ್ಲಿ ಕಾಣಿಸಿಕೊಂಡಿತು.

ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲ್ಲೂಕು ಕಾಶಿನಕುಂಟೆಯಿಂದ ಮೊಮ್ಮಗನೊಂದಿಗೆ ಬಂದಿದ್ದ ಶ್ರೀ ಸಂಗಪ್ಪ ಮುತ್ತಪ್ಪ ಕುಂಬಾರ ಅವರು ವೃತ್ತಿಯಲ್ಲಿ ವ್ಯವಸಾಯಗಾರರು. ಆರ್ಥಿಕ ಪರಿಸ್ಥಿತಿ ಚೆನ್ನಾಗಿಲ್ಲ ಎಂಬುದು ಅವರು ಮಾತನಾಡುವಾಗ ವ್ಯಕ್ತವಾಯಿತು. ಕುಂಬಾರ ಜಾತಿಗೆ ಸೇರಿದ ಶ್ರೀ ಸಂಗಪ್ಪ ಅವರು ತಮ್ಮ ಮಗಳ ಮಗನನ್ನು ನಾಲ್ಕನೆ ತರಗತಿಗೆ ಸೇರಿಸಲು ಕರೆದುಕೊಂಡು ಬಂದಿದ್ದರು. ''ಈ ಕಾಲ್ದಾಗೆ ಓದ್ಸೋದು ತುಂಬಾ ಕಷ್ಟ ..... ಮಳೆ ಹೋಗಿ ಮುಗಿಲ ಸೇರಿಕೊಂಡ್ಯತೆ, ನೂರೆಂಟು ಬೊರ್ ಕೊರೆದು ಬಾವಿಯಲ್ಲಾ ಬತ್ತಿ ಹೋಗ್ಯತೆ, ಕುಡಿಯಾಕೆ ಸರಿಯಾಗಿ ನೀರಿಲ್ಲ ಅಂದಮ್ಯಾಲೆ ಬೆಳೆ ಎಲ್ಲಿ ಕೈಗೆ ಸಿಗುತ್ತದೆ. ಎರಡು ಹೊತ್ತು ಹೊಟ್ಟೆ ತುಂಬ್ಸಿ ಕೊಳ್ಳೋದೆ ಕಷ್ಟ ಆಗ್ಯತೆ; ಅಂತದ್ರಾಗೆ ಮಕ್ಕಳ್ನ ಎಲ್ಲಿಂದ ಓದ್ಸೋದ್ರಿ. ನಮ್ಮ ಅಳಿಯ ಹುಡುಗ್ನ ಶಾಲೆ ಬಿಡ್ಸಿ ಕೂಲಿ ಕೆಲ್ಸಕ್ಕೆ ಹಾಕ್ಬೇಕು ಅಂತಿದ್ದೀನ್ರಿ, ನನಗೆ ಕರುಳು ಚುರುಕಂತು, ಈ ಕಡೆ ಹುಡುಗ್ರು ಮಠದಾಗ ಬಾಳ ಜನ ಓದ್ತಾ ಅವ್ರೆ, ನಮ್ಮ ಕಷ್ಟ ಸಾಯೋತನ್ಕ ಇದ್ದಿದ್ದೆ ಬಿಡಿ. ಹಂಗಂತ ಮಕ್ಕಳ ಭವಿಷ್ಯ ಹಾಳು ಮಾಡೋದು ಛಲೋ ಅಲ್ಲರಿ, ಅದ್ಕೆ ಸ್ವಾಮೇರ ಪಾದಕ್ಕೆ ಒಪ್ಸಿ ಹೋಗುವಾಂತ ಕರ್ಕೊಂಡು ಬಂದೆ. ಇಲ್ಲಿ ಒಂದ್ಸಲ ಸೇರಿಸಿದ್ರೆ ಮುಗಿತ್ರಿ, ಅವನ ಯೋಗಕ್ಷೇಮ ಎಲ್ಲಾನು ಬುದ್ಯೋರೋ ನೋಡ್ಕೊತ್ತಾರೆ. ಇದು ಲಿಂಗಾಯಿತರ ಮಠ ಆದ್ರೂ, ಎಲ್ಲಾ ಜನಾನೂ ಸೇರಿಸ್ಕೊಂಡು ದೊಡ್ಡ ಉಪಕಾರ ಮಾಡ್ತಾ ಅವ್ರೆ'' ಎಂದು ಹೇಳುವಾಗ ಆತನ ಮಾತುಗಳಲ್ಲಿ ಪ್ರಸ್ತುತ ಪರಿಸ್ಥಿತಿಯ ಅವಲೋಕನದ ಜೊತೆಗೆ ಶ್ರೀಮಠದ ಸೇವೆಯ ಬಗ್ಗೆ ಕೃತಜ್ಞತೆ ಭಾವನೆ ವ್ಯಕ್ತವಾಯಿತು.

ಶ್ರೀಮಠಕ್ಕೆ ಬಂದ ಎಲ್ಲರ ಅಭಿಪ್ರಾಯಗಳನ್ನು ದಾಖಲಿಸಲು ಕಷ್ಟಸಾಧ್ಯವಾದ ಮಾತು. ಅವರೆಲ್ಲರ ಪ್ರತಿನಿಧಿಗಳಾಗಿ ಎಂಟು ಜನರು ತಮ್ಮ ಭಾವನೆಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ಎಲ್ಲರ ಮನಸ್ಸಿನ ಭಾವನೆಗಳು ಇವರ ಮಾತುಗಳ ಮೂಲಕ ಸಾಕಾರ ರೂಪವನ್ನು ಪಡೆದುಕೊಂಡಿವೆ.

ಅವರನ್ನು ಸಂದರ್ಶಿಸುವಾಗ ಗುಲ್ಬರ್ಗಾದಿಂದ ತಮ್ಮ ಮೊಮ್ಮಗನನ್ನು ಕರೆದುಕೊಂಡು ಬಂದಿದ್ದ ಎಂಬತ್ತು ವರ್ಷದ ವೃದ್ಧರೊಬ್ಬರು ''ನಾವು ಒಂದೆರೆಡು ಮಕ್ಕಳ ಓದ್ಸೋಕೆ ಆಗ್ದೆ ಶ್ರೀ ಮಠಕ್ಕೆ ಸೇರ್ಸೋಕೆ ಕರ್ಕೊಂಡು ಬಂದೀವಿ. ಅಂತಾದ್ರಾಗೆ ಬುದ್ಯೋರು ಎಂಟು ಸಾವಿರ ಮಕ್ಕಳ ಅದ್ದಂಗೆ ನೋಡ್ಕೋತಾರೋ ಆ ದ್ಯಾವರೆ ಬಲ್ಲ. ಬುದ್ಯೋರು ಮನುಷ್ಯರಲ್ಲ, ಮನುಷ್ಯರೂಪದ ದ್ಯಾವ್ರು, ಇಲ್ಲಿ ಊಟದ ವ್ಯವಸ್ಥೆ, ಮಕ್ಕಳಿಗೆ ಇರೋಕೆ ಜಾಗದ ವ್ಯವಸ್ಥೆನ ನೋಡಾಕೆ ಎರಡು ಕಣ್ಣು ಸಾಲ್ದು, ನಿಜಕ್ಕೂ ಇದೊಂದು ಪವಾಡ. ಬುದ್ಯೋರ್ನ ಒಂದ್ಸಲ ಕಣ್ಣು ತುಂಬಾ ನೋಡಿದ್ರೆ ನನ್ನ ಜನ್ಮ ಸಾರ್ಥಕ ಅನಿಸ್ತು. ಅಂತಾದ್ರಾಗೆ ನಮ್ಮ ಹುಡುಗ್ರು ದಿನಾಲೂ ನೋಡೋ ಭಾಗ್ಯ ಪಡ್ಕೊಂಡವ್ರೆ. ಇಂಥ ಭಾಗ್ಯ ಎಷ್ಟು ಜನಕ್ಕೆ ಸಿಗ್ತದೆ. ಇದೆಲ್ಲ ಮಕ್ಕಳ ಪೂರ್ವಜನ್ಮದ ಪುಣ್ಯ'' ಅವರ ಮಾತಿಗೆ ಅಲ್ಲಿ ಸೇರಿದ್ದ ಪೋಷಕರು ಧ್ವನಿಗೂಡಿಸಿದರು.

ಶ್ರೀಮಠದಲ್ಲಿ ನೀಡುವ ಶಿಕ್ಷಣ ಕೇವಲ ಅಕ್ಷರ ಜ್ಞಾನಕ್ಕಷ್ಟೇ ಸೀಮಿತವಾಗಿಲ್ಲ; ಇಲ್ಲಿ ಅವರಿಗೆ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ಶಿಕ್ಷಣವನ್ನು ನೀಡಲಾಗುತ್ತಿದೆ. ಶ್ರೀಮಠದಲ್ಲಿ ಆಶ್ರಯ ಪಡೆದ ಎಲ್ಲರಿಗೂ ವೇದ ಮತ್ತು ಸಂಸ್ಕೃತ ಕಲಿಯಲು ಅವಕಾಶ ಕಲ್ಪಿಸಲಾಗಿದೆ. ವಾರದಲ್ಲಿ ಒಂದೆರಡು ದಿನ ಕಾಯಕ ಪ್ರಾತ್ಯಕ್ಷತೆ, ಪ್ರತಿದಿನ ಸಂಜೆ ನಡೆಯುವ ಸಾಮೂಹಿಕ ಪ್ರಾರ್ಥನೆಯ ನಂತರ ಪೂಜ್ಯ ಶ್ರೀ ಶ್ರೀಗಳವರು ನೀಡುವ ಆಶೀರ್ವಚನ ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸುವಲ್ಲಿ ಅಡಿಗಲ್ಲಾಗಿದೆ. ಇಲ್ಲಿ ನಡೆಯುವ ಪ್ರಾರ್ಥನೆ ಒಂದು ಅಪೂರ್ವ ದೃಶ್ಯ. ಇದನ್ನು ಕೇಳುವುದಕ್ಕಿಂತ ನೋಡಿಯೇ ಆನಂದಿಸಬೇಕು. ಇದು ಜೀವನದಲ್ಲಿ ಮರೆಯಲಾಗದ ಅಪೂರ್ವ ಘಟನೆ. ಇಲ್ಲಿ ಕಲ್ಲಾಗಿ ಬಂದವರು ಇಲ್ಲಿಯ ಪರಿಸರ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರ ಮಾರ್ಗದರ್ಶನದಿಂದ ಲೋಕಮಾನ್ಯ ಮಾಡುವಂತಹ ಸುಂದರ ಮೂರ್ತಿಯಾಗಿ ರೂಪುಗೊಳ್ಳುತ್ತಾರೆ.

ನಾಡಿನ ಪ್ರತಿಷ್ಠಿತ ಶೈಕ್ಷಣಿಕ ಸಂಸ್ಥೆಗಳಲ್ಲಿ ಒಂದಾಗಿರುವ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ವಿಶೇಷವಾಗಿ ಹಿಂದುಳಿದ, ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗೆ ಆಶಾಕಿರಣವಾಗಿದೆ. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಅಧ್ಯಕ್ಷರಾಗಿರುವ ಪರಮ ಪೂಜ್ಯ ಶ್ರೀ ಶ್ರೀಗಳವರ ಮಾರ್ಗದರ್ಶನದಲ್ಲಿ ಸಂಸ್ಥೆಯ ಉಪಾಧ್ಯಕ್ಷರು ಹಾಗೂ ಕ್ಷೇತ್ರದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು, ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪನವರು, ಶ್ರೀಮಠದ ಆಡಳಿತಾಧಿಕಾರಿಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ ಅವರು ಸಮರ್ಥವಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಕಳೆದ ಅನೇಕ ದಶಕಗಳಲ್ಲಿ ಲಕ್ಷಾಂತರ ಜನ ಬಡ ವಿದ್ಯಾರ್ಥಿಗಳು ಶ್ರೀಕ್ಷೇತ್ರದಲ್ಲಿ ಆಶ್ರಯ ಪಡೆದು ವಿದ್ಯಾವಂತರಾಗಿ ನಾಡಿನ, ರಾಷ್ಟ್ರದ ಮೂಲೆ ಮೂಲೆಗಳಲ್ಲಿ ಹಾಗೂ ವಿದೇಶಗಳಲ್ಲಿಯೂ ಸಿದ್ಧಗಂಗಾ ಜ್ಯೋತಿಯನ್ನು ಬೆಳಗಿಸುತ್ತಿದ್ದಾರೆ. ಲಕ್ಷೋಪ ಲಕ್ಷಜನರ ಮನೆಗಳಲ್ಲಿ ಪರಮಪೂಜ್ಯರ ಆಶೀರ್ವಾದ ಶ್ರೀ ರಕ್ಷೆ ಅವರ ಬಾಳನ್ನು ಬೆಳಗಿಸುತ್ತಿದೆ. ಇಲ್ಲಿ ಶಿಕ್ಷಣ ಪಡೆದ ವಿದ್ಯಾರ್ಥಿಗಳು ಅಕ್ಷರ ಜ್ಞಾನದ ಜೊತೆಗೆ ಶಿಸ್ತು, ಪ್ರಾಮಾಣಿಕತೆ, ಜೀವನಶ್ರದ್ಧೆ, ಮಾನವೀಯತೆ, ಆಚಾರ-ವಿಚಾರ, ಕಾಯಕನಿಷ್ಠೆ ಇವೇ ಮೊದಲಾದ ಮಾನವೀಯ ಉದಾತ್ತಗುಣಗಳನ್ನು ಮೈಗೂಡಿಸಿಕೊಂಡು ಆರೋಗ್ಯವಂತ ಸಮಾಜ ನಿರ್ಮಾಣ ಕಾರ್ಯದಲ್ಲಿ ತಮ್ಮದೇ ಆದ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಸಹಕಾರ : ಶ್ರೀ ಪಿ.ಎಸ್. ಪುಟ್ಟಶಂಕರಯ್ಯ
ಶ್ರೀಮಠದ ಆಡಳಿತಾಧಿಕಾರಿಗಳು
ನೆರವು : ಶ್ರೀ ಎಂ. ರೇಣುಕಾರಾಧ್ಯ
ಸಹ ಸಂಪಾದಕರು, ಸಿದ್ಧಗಂಗಾ





ಕಾಯಕವೇ ಕೈಲಾಸ

ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ಶ್ರೀ ಸಿದ್ಧಗಂಗಾ ಮಠ – ೫೭೨ ೧೦೪
ತುಮಕೂರು ಜಿಲ್ಲೆ, ಕರ್ನಾಟಕ ರಾಜ್ಯ.



ದೂರವಾಣಿ : ೨೮೨೧೧
ಫ್ಯಾಕ್ಸ್ ೦೮೧೬-೨೮೨೫೧೧

ಕ್ರ. ಸಂ. ೫೩೫/೦೨-೦೩

ದಿನಾಂಕ : ೮-೬-೨೦೦೨

## ಸಂತಾಪ ಸಂದೇಶ

ಭಾರತದ ಉಪರಾಷ್ಟ್ರಪತಿಗಳಾಗಿ, ಸರ್ವಜನ ಪ್ರಿಯರಾಗಿ ಸೇವೆ ಸಲ್ಲಿಸಿದ ಸನ್ಮಾನ್ಯ ಶ್ರೀ ಬಸಪ್ಪದಾನಪ್ಪ ಜತ್ತಿಯವರು ದಿನಾಂಕ : ೭-೬-೨೦೦೨ರಂದು ದಿವಂಗತರಾದುದನ್ನು ತಿಳಿದು ತುಂಬಾ ದುಃಖವಾಯಿತು. ಶ್ರೀಯುತರು ಕರ್ನಾಟಕದ ಹಾಗೂ ಭಾರತದ ರಾಜಕಾರಣದಲ್ಲಿ ವಿಶಿಷ್ಟ ಸ್ಥಾನ ಮಾನವನ್ನು ಗಳಿಸಿದವರಾಗಿದ್ದರು. ಹಂತ ಹಂತವಾಗಿ ವಿವಿಧ ಹುದ್ದೆಗಳನ್ನು ಅಲಂಕರಿಸಿ ಜನಮನ್ನಣೆಯನ್ನು ಗಳಿಸಿದ್ದರು. ಸಚಿವರಾಗಿ, ಮುಖ್ಯಮಂತ್ರಿಗಳಾಗಿ, ಉಪರಾಷ್ಟ್ರಪತಿಗಳಾಗಿ, ಹಂಗಾಮಿ ರಾಷ್ಟ್ರಪತಿಗಳಾಗಿ ಸೇವೆ ಸಲ್ಲಿಸಿದ ಶ್ರೀಯುತರು ಬಸವ ತತ್ವಗಳ ಆರಾಧಕರಾಗಿದ್ದರು. ಕೂಡಲ ಸಂಗನ ಶರಣರಿಗೆ ನೊಸಲ ವಿಭೂತಿಯೇ ಶೃಂಗಾರವೆಂಬಂತೆ ಹಣೆಯ ಮೇಲೆ ಸದಾ ವಿಭೂತಿಯನ್ನುಧರಿಸುತ್ತಿದ್ದರು. ಗಾಂಧಿಜೀಯವರ ತತ್ವನುಯಾಯಿಗಳಾಗಿದ್ದ ಜತ್ತಿಯವರು ಒಳ್ಳೆಯ ವಾಗ್ಮಿಗಳಾಗಿದ್ದರು. ಅವರ ನುಡಿಗಳು ಜನ ಸಾಮಾನ್ಯರಿಗೂ ಅರ್ಥವಾಗುವಂತೆ ತಿಳಿಯಾಗಿರುತ್ತಿದ್ದವು. ಸರಳ ಜೀವನ ಜತ್ತಿಯವರದಾಗಿತ್ತು. ಆಜೀವ ಪರ್ಯಾಂತ ಬಸವ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ತಾವು ಎಲ್ಲರೊಡನೆ ಸಮ್ಮಿಳನವಾಗುವ ಸಮನ್ವಯ ಶೀಲರು. ಮಠಮಾನ್ಯಗಳಲ್ಲಿ ಭಕ್ತಿ ಶ್ರದ್ಧೆಗಳನ್ನು ತಾಳಿದ್ದರು. ಸಿದ್ಧಗಂಗಾ ಮಠದೊಂದಿಗೆ ಮಧುರ ಬಾಂಧವ್ಯವನ್ನು ಬೆಳೆಸಿಕೊಂಡು ಬಂದವರಾಗಿದ್ದರು. ಜತ್ತಿಯವರ ಅಗಲಿಕೆಯಿಂದ ಗಾಂಧಿಯುಗದ ಹಿರಿಯ ತಲೆಮಾರು ಕೊನೆಯಾದಂತೆ ಭಾಸವಾಗುತ್ತಿದೆ. ರಾಷ್ಟ್ರ ಒಬ್ಬ ತತ್ವ ನಿಷ್ಠರಾಜಕೀಯ ಮುತ್ಸದ್ದಿಯನ್ನು ಬಸವ ತತ್ವಪ್ರೇಮಿಯನ್ನು ಕಳೆದುಕೊಂಡಂತಾಗಿ ತುಂಬಲಾರದ ನಷ್ಟವಾಗಿದೆ.

ಆದರ್ಶಕ್ಕೆ ಹೆಸರಾಗಿದ್ದ ಶ್ರೀ ಜತ್ತಿಯವರ ಅಗಲಿಕೆಯಿಂದ ಅವರ ಕುಟುಂಬ ವರ್ಗದವರಿಗೆ ಹಾಗೂ ಅಭಿಮಾನಿಗಳಿಗೆ ಆಗಿರುವ ದುಃಖವನ್ನು ಸಹಿಸುವ ಶಕ್ತಿಯನ್ನು ಬಸವಾದಿ ಪ್ರಮಥರು ನೀಡಲೆಂದು ಆಶಿಸುತ್ತಾ ಲಿಂಗದೊಳಗಾದ ಜತ್ತಿಯವರ ಆತ್ಮಕ್ಕೆ ಗೌರವವನ್ನು ಸೂಚಿಸುತ್ತೇವೆ.

(ಶ್ರೀ ಶಿವಕುಮಾರ ಸ್ವಾಮಿಗಳು)
ಶ್ರೀ ಸಿದ್ಧಗಂಗಾ ಮಠ

# ಸಜ್ಜನಿಕೆಯ ಸಾಕಾರಮೂರ್ತಿ ಡಾ. ಬಿ.ಡಿ. ಜತ್ತಿ

**ಕ**ರ್ನಾಟಕ ಕಂಡ ಅಪರೂಪದ ತತ್ವನಿಷ್ಠ ಹಿರಿಯ ರಾಜಕಾರಣಿಗಳಲ್ಲಿ ಶ್ರೀ ಬಸಪ್ಪ ದಾನಪ್ಪ ಜತ್ತಿ ಅವರೂ ಒಬ್ಬರು. ತಮ್ಮ ಸರಳತೆ, ಸಜ್ಜನಿಕೆ, ವಿನಯವಂತಿಕೆಯಿಂದ ರಾಷ್ಟ್ರದ ಜನತೆಯ ಹೃದಯಮಂದಿರದಲ್ಲಿ ಹಚ್ಚಹಸಿರಾಗಿರುವ ಡಾ. ಬಿ.ಡಿ. ಜತ್ತಿಯವರು ''ಮೂರ್ತಿ ಚಿಕ್ಕದಾರೂ ಕೀರ್ತಿ ದೊಡ್ಡದು'' ಎಂಬ ನಾಣ್ಣುಡಿಗೆ ಉಜ್ವಲ ನಿದರ್ಶನ. ತಮ್ಮ ಜೀವನದುದ್ದಕ್ಕೂ, ಸತ್ಯ, ನೀತಿ, ಪ್ರಾಮಾಣಿಕತೆಗೆ ಧರ್ಮಬದ್ಧರಾಗಿ ಜತ್ತಿಯವರದು ಅಪರೂಪದ ವ್ಯಕ್ತಿತ್ವ. ಕೀರ್ತಿ, ಅಧಿಕಾರಗಳಿಗೆ ಆಸೆಪಡದೆ ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಶ್ರದ್ಧೆ, ನಿಷ್ಠೆಯಿಂದ ಮಾಡಿದರು. ಇದರಿಂದ ಅವರು ಬೇಡವೆಂದರೂ ಕೀರ್ತಿ ಹಾಗೂ ಅಧಿಕಾರಗಳು ಅವರ ಬೆನ್ನತ್ತಿ ಬಂದವು.

**ಅ**ವಿಭಾಜ್ಯ ಬಿಜಾಪುರ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಸಾವಳಗಿಯಲ್ಲಿ ೧೯೧೨ರಲ್ಲಿ ಸೆಪ್ಟೆಂಬರ್ ೧೦ರಂದು ಜನಿಸಿದ ಶ್ರೀ ಬಿ.ಡಿ. ಜತ್ತಿಯವರು ಗಾಂಧೀಜಿಯವರ ಕರೆಗೆ ಓಗೊಟ್ಟು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ ಅಪ್ಪಟ ದೇಶಭಕ್ತರು. ೧೯೩೪ರಲ್ಲಿ ಬಿ.ಎ. ಪದವಿ, ೧೯೪೦ರಲ್ಲಿ ಕಾನೂನು ಪದವಿಯನ್ನು ಪಡೆದ ಜತ್ತಿಯವರು ೧೯೪೫ರಲ್ಲಿ ಸಾವಳಗಿ ಗ್ರಾಮಪಂಚಾಯಿತಿಗೆ ಪ್ರವೇಶಿಸುವುದರ ಮೂಲಕ ತಮ್ಮ ರಾಜಕೀಯ ಜೀವನವನ್ನು ಪ್ರಾರಂಭಿಸಿದರು. ನಂತರ ಜಮಖಂಡಿ ನಗರಸಭೆಯ ಅಧ್ಯಕ್ಷರಾಗಿ, ರಾಜ್ಯ ಭೂಸುಧಾರಣಾ ಮಂಡಳಿಯ ಅಧ್ಯಕ್ಷರಾಗಿ, ರಾಜ್ಯದ ಮುಖ್ಯಮಂತ್ರಿಗಳಾಗಿ, ಪಾಂಡಿಚೇರಿಯ ಲೆಫ್ಟಿನೆಂಟ್ ಗವರ್ನರ್ ಹಾಗೂ ಒರಿಸ್ಸಾ ರಾಜ್ಯಪಾಲರಾಗಿ ನಿಸ್ವಾರ್ಥ ಹಾಗೂ ದಕ್ಷತೆಯಿಂದ ಸೇವೆಸಲ್ಲಿಸಿದ ಶ್ರೀ ಬಿ.ಡಿ. ಜತ್ತಿಯವರು ತಮ್ಮ ಅಧಿಕಾರಾವಧಿಯಲ್ಲಿ ಎಂದೂ ಭ್ರಷ್ಟಾಚಾರಕ್ಕೆ ಅವಕಾಶಮಾಡಿಕೊಡಲಿಲ್ಲ. ಉಪರಾಷ್ಟ್ರಪತಿ ಗಳಾಗಿ ಸೇವೆಸಲ್ಲಿಸಿದ ಜತ್ತಿಯವರು ರಾಷ್ಟ್ರದ ಅತ್ಯುನ್ನತ ಹುದ್ದೆಯಾದ ರಾಷ್ಟ್ರಪತಿ (ಹಂಗಾಮಿ) ಸ್ಥಾನ ಅಲಂಕರಿಸುವ ಏಕೈಕ ಕನ್ನಡಿಗರೆಂಬ ಅಭಿಮಾನಕ್ಕೆ ಪಾತ್ರರಾದವರು.

ಬಸವಣ್ಣನವರ ತತ್ವಾದರ್ಶಗಳ ಮುಂಬೆಳಕಿನಲ್ಲಿ ಆದರ್ಶ ಜೀವನವನ್ನು ನಡೆಸಿದ ಬಿ.ಡಿ. ಜತ್ತಿಯವರು ಬಸವತತ್ವ ಆರಾಧಕರಾಗಿದ್ದರು. ೧೯೬೪ರಲ್ಲಿ ಬೆಂಗಳೂರಿನಲ್ಲಿ ಬಸವ ಸಮಿತಿಯನ್ನು ಸ್ಥಾಪಿಸಿ ಅದಕ್ಕೆ ಅಧ್ಯಕ್ಷರಾದರು. ಅಂದಿನಿಂದ ತಮ್ಮ ಕೊನೆ ಉಸಿರುವವರೆಗೂ ಅಧ್ಯಕ್ಷರಾಗಿ ಅವರು ಸಲ್ಲಿಸಿದ ಸೇವೆ, ನೀಡಿದ ಮಾರ್ಗದರ್ಶನ ಸದಾ ನೆನಪಿನಲ್ಲಿ ಉಳಿಯುವಂತಹುದು.

**ಕ**ರ್ನಾಟಕದ ಮುಖ್ಯಮಂತ್ರಿಗಳಾಗಿದ್ದಾಗ ರಾಜ್ಯದಲ್ಲಿ ಎಚ್.ಎಂ.ಟಿ. ಎನ್.ಜಿ.ಇ.ಎಫ್. ಕಾರ್ಖಾನೆಗಳ ಸ್ಥಾಪನೆಗೆ ಕಾರಣರಾದರು. ಮಂಗಳೂರು ಬಂದರು ಸ್ಥಾಪನೆ ಮತ್ತು ಹುಬ್ಬಳ್ಳಿ-ಧಾರವಾಡ ನಗರಕ್ಕೆ ಮಹಾನಗರ ಪಾಲಿಕೆ ಸ್ಥಾನಮಾನ ದೊರಕಿಸಿ ಕೊಟ್ಟ ಹಿರಿಮೆ ಅವರದು.

**ಗಾ**ಂಧೀಜಿಯವರ ಪ್ರಭಾವಕ್ಕೆ ಒಳಗಾಗಿದ್ದ ಡಾ. ಜತ್ತಿಯವರು ಕೊನೆಯವರೆಗೂ ಗಾಂಧೀಜಿಯವರ ಆದರ್ಶವನ್ನು ಅಳವಡಿಸಿ ಕೊಂಡು ಜೀವನ ನಡೆಸಿದ ಸಾತ್ವಿಕ ವ್ಯಕ್ತಿ. ರಾಜಕಾರಣಕ್ಕೆ ಆಧ್ಯಾತ್ಮದ ತಳಹದಿ ಅಗತ್ಯ ಎಂಬ ಗಾಂಧೀತತ್ವದ ಆಚರಣೆಗೆ ಜೀವಂತ ಉದಾಹರಣೆಯಾಗಿದ್ದ ಶ್ರೀ ಬಿ.ಡಿ. ಜತ್ತಿಯವರು ಈ ರಾಷ್ಟ್ರ ಕಂಡ ಅಪರೂಪದ ರಾಜಕಾರಣಿ. ಇದು ಕನ್ನಡಿಗರ ಹೆಮ್ಮೆ.

**ತೊ**ಂಬತ್ತು ವರ್ಷ ತುಂಬು ಜೀವನ ನಡೆಸಿದ ಡಾ. ಬಿ.ಡಿ. ಜತ್ತಿಯವರು ಜೂನ್ ೭, ೨೦೦೨ರಂದು ಲಿಂಗದೊಳಗೊಂದಾದರು. ಅವರ ಆತ್ಮಕ್ಕೆ ದಯಾಮಯನಾದ ಪರಮಾತ್ಮನು ಚಿರಶಾಂತಿಯನ್ನು ನೀಡಲಿ ಎಂದು 'ಸಿದ್ಧಗಂಗಾ' ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

– ಎಚ್.ಎಸ್.ಎಸ್.





# ದೇವರು

– ಕವಿತಾಕೃಷ್ಣ
ಸಾಹಿತಿಗಳು, ಕ್ಯಾತ್ಸಂದ್ರ

**ಭಾ**ರತ ದೇವರು ತವರೂರು, ಎಲ್ಲಾ ಊರುಗಳಲ್ಲೂ ಪೈಸೆಗೊಂದು, ಕೊಸರಿಗೆ ಮೂರು ದೇವರುಗಳಿವೆ. ಸಾತ್ವಿಕ ದೇವರುಗಳನ್ನೂ, ಕ್ಷುದ್ರ ದೇವರುಗಳ ಹೆಸರನ್ನು ಪಟ್ಟಿಮಾಡಲು ತೊಡಗಿದರೆ ಜಗದಗಲವೂ ಸಾಲದಾದೀತು. ನಾಡದೇವರು, ಊರುದೇವರು, ಮನೆದೇವರು, ಮನದೇವರು, ಮನೆಗೂಡಿನ ದೇವರು ಹೀಗೆ ಸಾವಿರಾರು ದೇವರುಗಳಿದ್ದಾರೆ. ದೇವರಲ್ಲಿ ಭಕ್ತಿ, ಪ್ರೀತಿ, ಗೌರವ, ಆರಾಧನಾಭಾವ ಒಂದೆಡೆಯಾದರೆ; ಇನ್ನೊಂದೆಡೆ ಭಯಮಿಶ್ರಿತ ಮೂಢಭಕ್ತಿ ದಟ್ಟವಾಗಿ ಹಬ್ಬಿದೆ. ಭಾರತೀಯರು ಪ್ರಾಣಬಿಟ್ಟರೂ ದೇವರನ್ನು ಮಾತ್ರ ಬಿಡರು.

ದೇವರ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಹಾಗೆಯೇ ಅಸ್ತಿತ್ವದ ಬಗ್ಗೆಯೂ ಭಿನ್ನಾಭಿಪ್ರಾಯಗಳಿವೆ. ದೇವರ ಇರುವಿಕೆ ನಂಬುವವ 'ಆಸ್ತಿಕ'ನೆನಿಸಿದ. ನಂಬದವ 'ನಾಸ್ತಿಕ' ಎನಿಸಿದ. 'ದೈವದ ಸೂತ್ರದ ಬೊಂಬೆಯೇ ಮಾನವ' ಎಂದು ಆಸ್ತಿಕ ಹೇಳಿದರೆ, 'ದೈವವು ಮಾನವನು ನಿರ್ಮಿಸಿದ ಸೂತ್ರದ ಬೊಂಬೆ' ಎಂದು ನಾಸ್ತಿಕ ಹೇಳುತ್ತಾನೆ. ಮುಗ್ಧ ಜಾನಪದರು ದೇವರು 'ಹೂವಿನಾಗೆ ಹುದಿಗ್ಯಾನ, ಮಾಲ್ಯಾಗೆ ಮಲಗ್ಯಾನೆ, ಮೊಗ್ಗಾಗ ಕಣ್ಣು ತೆರೆದಾನ। ಲಿಂಗಯ್ಯನ ನೋಡಟಗೆ ನಿದ್ದೆ ಬಯಲಾಗಿ' ಎಂದು ತಮ್ಮ ಭಾವನೆ ವ್ಯಕ್ತಪಡಿಸಿದ್ದಾರೆ. ಋಗ್ವೇದವು ದೇವರು ಒಬ್ಬನೇ ಬಲ್ಲವರು ಅದನ್ನು ಬಹುವಾಗಿ ಹೇಳುವರು ಎನ್ನುತ್ತದೆ. ಸರ್ವಜ್ಞಕವಿ 'ಒಬ್ಬನಲ್ಲದೆ ಜಗಕೆ ಇಬ್ಬರುಂಟೆ?' ಎಂದು ಪ್ರಶ್ನಿಸುತ್ತಾನೆ. ಬಸವಣ್ಣ 'ದೇವನೊಬ್ಬ ನಾಮ ಹಲವು' ಎಂದಿದ್ದಾರೆ. ಒಟ್ಟಾರೆ ಇವರೆಲ್ಲ ದೇವರು ಇದ್ದಾನೆ. ಅವನು ಒಬ್ಬನೇ ಎಂದು ಸಾರಿದ್ದಾರೆ.

ಬುದ್ಧನು ದೇವರ ಬಗ್ಗೆ ಏನೂ ಹೇಳಲಿಲ್ಲ. ಚಾರ್ವಕರು ಮಾತ್ರ 'ಕಾಣದುದ ಬಯಸುವರೆ ಕರ್ಪೂರ ಕೆಂಡವನು ಬಯಸಿದಂತೆ' ಎಂದು ಹೇಳಿದರು. ಕಾಣದ ದೇವರ ಬಗ್ಗೆ, ಸ್ವರ್ಗ, ನರಕಗಳ ಬಗ್ಗೆ ನಾವು ಬಯಸುವುದೂ ಒಂದೇ, ಕರ್ಪೂರ ಕೆಂಡ ಬಯಸುವುದೂ ಒಂದೆ. ಹೇಗೆ ಕರ್ಪೂರ ಬೆಂಕಿ ಸಂಗಬಯಸಿ ನಾಶವಾಗುವಂತೆ ಮಾನವನೂ ಸಹ ದೇವರು, ಸ್ವರ್ಗ, ನರಕ ಬಯಸಿ ವಿನಾಶವಾಗುತ್ತಾನೆ ಎಂದು ಸಾರಿದರು. ಬುದ್ಧ ಕೆಲವರನ್ನು ನೀವು ದೇವರನ್ನು ಕಂಡಿರುವಿರೆ? ನಿಮ್ಮ ತಂದೆ, ತಾತ, ತಾಯಿ, ಅಜ್ಜಿ, ಮುತ್ತಾತ, ಮುತ್ತಜ್ಜಿ ಕಂಡಿರುವರೆ? ಎಂದು ಕೇಳುತ್ತಿದ್ದ. ಜನ ಇಲ್ಲವೆಂದು ಉತ್ತರಿಸಿದಾಗ ಕಾಣದ ವಸ್ತು ಬಗ್ಗೆ ತಿಳಿಯ ಹೊರಡುವುದು ಯೋಗ್ಯವೇ? ಎಂದು ಪ್ರಶ್ನಿಸುತ್ತಿದ್ದ. ಬುದ್ಧನ ದೃಷ್ಟಿಯಲ್ಲೂ 'ದೇವರು ಇಲ್ಲ' ಎಂದೇ ಹೇಳಬಹುದು. ಇನ್ನು ಕೆಲವರು ದೇವರು ಸರ್ವಾಂತರ್ಯಾಮಿ ಆಗಿದ್ದರೆ ಓರ್ವರು, ಓರ್ವರನ್ನು ಕೊಲ್ಲಲಾಗುತ್ತಿತ್ತೆ? ಎಂದು ಪ್ರಶ್ನಿಸುವರು.

ಬಹುಪಾಲು ಧರ್ಮಗಳು, ದೇವರನ್ನು ನಂಬುತ್ತವೆ. ಮುಸ್ಲಿಮರು ಅಲ್ಲನನ್ನೂ, ಕ್ರೈಸರು ಗಾಡ್ ಅನ್ನು, ಹಿಂದುಗಳು ದೇವರನ್ನು ನಂಬುತ್ತಾರೆ. ಆದರೆ ಹಲವು ಬುದ್ಧಿಜೀವಿಗಳು ದೇವರು ಕಲ್ಪಿತವ್ಯಕ್ತಿ ಎನ್ನುತ್ತಾರೆ. ದೇವರು ಪ್ರಾಣಿ, ಪಕ್ಷಿ, ಮಾನವರನ್ನು ಸೃಷ್ಟಿಸಿದನೋ ಬಿಟ್ಟನೋ, ಆದರೆ ಮಾನವ ಮಾತ್ರ ದೇವರನ್ನು ಹುಟ್ಟಿಸಿದ ಎನ್ನುವರು. ಆದರೆ ಸ್ವಾಮಿ ರಾಮಕೃಷ್ಣ ಪರಮಹಂಸರು ''ರಾತ್ರಿ ಗಗನದಲ್ಲಿ ಹಲವು ನಕ್ಷತ್ರಗಳು ಕಾಣಿಸುತ್ತವೆ. ಆದರೆ ಸೂರ್ಯೋದಯವಾದ ನಂತರ ಕಾಣಿಸುವುದಿಲ್ಲ. ಆದ ಕಾರಣ ಹಗಲು ಆಕಾಶದಲ್ಲಿ ನಕ್ಷತ್ರಗಳು ಇಲ್ಲವೆನ್ನಲಾಗುವುದೆ? ಅಂತೆಯೇ ಎಲೈ ಮಾನವನೇ, ನೀನು ಅಜ್ಞಾನದಲ್ಲಿರುವವರೆಗೆ ದೇವರು ನಿನಗೆ ಕಾಣನು. ಅವನು ಇದ್ದರೂ ನೀನು ಇಲ್ಲವೆಂದು ಹೇಳದಿರು'' ಎನ್ನುತ್ತಾರೆ. ಸ್ವಾಮಿ ವಿವೇಕಾನಂದರೂ ಸಹ 'ತಂತಿಯಲ್ಲಿ ವಿದ್ಯುತ್ ಇದೆ. ಆದರೆ ಕಣ್ಣಿಗೆ ಕಾಣದು; ಹಾಗೆಯೇ ದೇವರು ಇದ್ದಾನೆ. ಎಲ್ಲರ ಕಣ್ಣಿಗೆ ಕಾಣಿಸನು' ಎನ್ನುತ್ತಾರೆ.

''ಹೊರ ಹೊರಗಾಡಿದರೇನುಂಟು? ಒಳವರಿದು ನೋಡಿದರಲ್ಲವೆ ದೇವನುಂಟು.'' ಎನ್ನುತ್ತಾನೆ ರತ್ನಾಕರವರ್ಣಿ. 'ಪವಿತ್ರ ಆತ್ಮಸಾಕ್ಷಿಯೇ ಎಲ್ಲರಲ್ಲಿರುವ ದೇವರು'. ಎಂದು ಮಲ್ಲಾಡಿಹಳ್ಳಿ 'ತಿರುಕ'ರು ಹೇಳಿದರೆ, ಗಾಂಧೀಜಿಯ ಸತ್ಯವೇ ದೇವರು ಎನ್ನುತ್ತಾರೆ. ಸೃಷ್ಟಿಯ ರೂಪೇ ದೇವರು, ಪ್ರಕೃತಿಯೇ ದೇವರು, ಎಂದಿದ್ದಾರೆ ಅನುಭಾವಿಗಳು, ದೇವರ ಆಕಾರದ ಬಗ್ಗೆಯೂ ವಿಚಾರಮಂಥನ ನಡೆದಿದೆ. ಆತ ಆಕಾರನೆಂದರೆ ಕೆಲವರು ನಿರಾಕಾರ ಎಂದಿದ್ದಾರೆ. ''ಕಣ್ಣೆ ಕಾಂಬಡೆ ರೂಪಲ್ಲ, ಕೈಗೆ ನಿಲುವಡೆ ದೇಹಿಯಲ್ಲ, ನಡೆದಡೆ ಗಮನಿಯಲ್ಲ, ನುಡಿದಡೆ ವಾಚಾಳಿಯಲ್ಲ, ನಿಂದಿಸಿದವಗೆ ಹಗೆಯಲ್ಲ, ಗುಹೇಶ್ವರ ನಿಲುವು ಮಾತಿನ ಮಾಯೆಗೆ ಸಿಲುಕುವುದೆ? ಎನ್ನುತ್ತಾರೆ ಪ್ರಭುದೇವರು. ಮುಪ್ಪಿನ ಷಡಾಕ್ಷರಿ 'ಅವರವರ ದರುಶನಕೆ ಅವರವರ ವೇಷದಲಿ' ಕಾಣುವನೆಂದು ಹೇಳಿದರೆ; ಕುವೆಂಪು ಅವರು 'ಜಗದ ದೇಗುಲದಲ್ಲಿ ಜಗದುದಯಕಾರಣನ ಕಾಣದವನೆಂತು ಕಾಣ್ಬನು ಶಿವನ ಗುಡಿಯಲ್ಲಿ' ಎಂದಿದ್ದಾರೆ.

ದೇವರು ಯಾವಾಗ ಎಂದರೆ ಗ್ರಾಮೀಣರು 'ಸಂಕಟ ಬಂದಾಗ ವೆಂಕಟರಮಣ' ಎಂದು ಉತ್ತರಿಸಿದ್ದಾರೆ. ಸುಖ ಬಂದರೆ ದೇವರು ಬೇಡವಾಗಬಹುದಲ್ಲವೆ? ನಿಜ ಅಹಂ ಅಧಿಕವಾದರೆ ಅವನೇ ದೇವರಾಗಿಯೂ ಬಿಡುತ್ತಾನೆ. ಅತಿಭಯದಿಂದ ಮೂಡಿದ ದೇವರು ಮಾನವರಲ್ಲಿ ಸೃಜನಶೀಲತೆ ಎಂತು ಬೆಳೆಸಿಯಾನು. ದೇವರಿದ್ದಾನೆಂಬ ಭಯದಿಂದ, ನರಕಸ್ವರ್ಗ ಕಲ್ಪನೆಯಿಂದ ಮಾನವನ ಅಮಾನವೀಯ ಕೃತ್ಯಾ ಮಾಡಲು ಹೆದರುವವನು. 'ಮಾನವ ತಾನು ದೊಡ್ಡವನಾಗದೆ ತನ್ನ ದೇವರನ್ನು ದೊಡ್ಡದು ಮಾಡಲಾರ' ಎಂಬ ಶಿವರಾಮ ಕಾರಂತರ ಸಕಾಲಿಕ ಎಚ್ಚರ ನಮ್ಮಲ್ಲಿ ಸದಾ ಜಾಗೃತವಿರಬೇಕು.

# ವೀರಶೈವ ಸಾಹಿತ್ಯದಲ್ಲಿ ಪ್ರಸಾದದ ಪರಿಕಲ್ಪನೆ

– ಡಾ ॥ ಸಿ. ನಾಗಭೂಷಣ
ಪ್ರವಾಚಕರು
ಕನ್ನಡ ಅಧ್ಯಯನ ವಿಭಾಗ
ಸ್ನಾತಕೋತ್ತರ ಕೇಂದ್ರ, ರಾಯಚೂರು.

ಪ್ರತಿಯೊಬ್ಬ ಮಾನವ ಸಂಸ್ಕಾರದಿಂದ ಲಿಂಗವಂತ ಧರ್ಮದ ಅನುಯಾಯಿ ಅಂದರೆ ಆತನ ಸರ್ವಾಂಗೀಣ ಜೀವನ ಪ್ರಗತಿಗಾಗಿ ಮಾನವೀಯ ಬದುಕಿಗಾಗಿ ಆಚರಣೆಗಿರುವ ಜೀವನ ವಿಧಾನವಾಗಿ ಅಷ್ಟಾವರಣಗಳು ಪರಿಣಮಿಸಿವೆ. ವೀರಶೈವ ಧರ್ಮವನ್ನು ಸ್ವೀಕರಿಸಿದ ವ್ಯಕ್ತಿಯು ತನ್ನ ಗುರಿಯಾದ ಲಿಂಗಾಂಗ ಸಾಮರಸ್ಯ ಪಡೆಯಬೇಕಾದರೆ ಅಷ್ಟಾವರಣಗಳ ಕಕ್ಷೆಯಲ್ಲಿರಬೇಕು. ಈ ಆವರಣಗಳು ಮತಾಚಾರದ ಕಟ್ಟು ಕಟ್ಟಳೆಗಳನ್ನು ದೃಢಪಡಿಸುವುದರ ಜೊತೆಗೆ ವ್ಯಕ್ತಿಯನ್ನು ಪ್ರತ್ಯೇಕ ಸಾಧಕನನ್ನಾಗಿ ಸಿದ್ಧಪಡಿಸಿ ಇಡೀ ಸಮಾಜವನ್ನೇ ಗುರಿಯ ಕಡೆ ಒಯ್ಯುವ ಮುಖ್ಯ ಸಾಧನವಾಗಿದೆ. ಕ್ರಿಯಾಶೀಲವೂ ಸಾಪೇಕ್ಷವೂ ಲೋಕ ಸಮ್ಮತವೂ ಆದ ಲಿಂಗಾಯತ ಶೀಲನೀತಿಗಳನ್ನು ಗುರುತಿಸುವುದಕ್ಕೆಂದು ಅಷ್ಟಾವರಣ ಭಾವಗಳು ರಚಿತವಾಗಿವೆ.

ಅಷ್ಟಾವರಣ ಎಂದರೆ ಎಂಟು ಹೊದಿಕೆಗಳು. ಇವು ಧಾರ್ಮಿಕ ಆಚರಣೆಯಲ್ಲಿ ಮಹತ್ತರವಾದ ಅರ್ಥವ್ಯಾಪ್ತಿಯನ್ನು ಪಡೆದಿವೆ. ಇವು ಸಾಧಕನ ಸುತ್ತ ನೈತಿಕ ಕ್ರಿಯಾಚಾರಗಳು ತಳಹದಿಯಾದ ಭಕ್ತ-ಜ್ಞಾನ. ಕರ್ಮಗಳ ಸಮನ್ವಯದ ಗೋಡೆಯನ್ನು ಕಟ್ಟಿ ಅವನ್ನು ರಕ್ಷಿಸುವ ವಜ್ರಕವಚಗಳಾಗಿವೆ. ಸರ್ಪಭೂಷಣ ಸ್ವಾಮಿಗಳ ಮಾತಿನಲ್ಲಿ ಹೇಳುವುದಾದರೆ ಅಷ್ಟಾವರಣಗಳು ಶರೀರವೆಂದೆಂಬುವ ಹೊಲಸ ಹಸನುಮಾಡಿ ಪರತತ್ವವೆಂಬ ಬೆಳೆಯನೆ ಬೆಳೆದುಣ್ಣಲು ಪ್ರಥಮ ಸೋಪಾನಗಳಾಗಿವೆ.

ವೀರಶೈವ ಸಿದ್ಧಾಂತವನ್ನು ನಿರೂಪಿಸುವಾಗ ಅಷ್ಟಾವರಣಗಳು ಅಂಗ, ಪಂಚಾಚಾರಗಳು ಪ್ರಾಣ, ಷಟ್ಸ್ಥಲಗಳು ಆತ್ಮವೆಂದು ಹೇಳುವುದು ರೂಢಿಯಲ್ಲಿದೆ. ತಾತ್ವಿಕ ವಿಚಾರಗಳನ್ನು ಮೊದಲು ಲೌಕಿಕ ಮನೋಭೂಮಿಕೆಯಲ್ಲಿ ತಿಳಿಯಬೇಕು. ಅದನ್ನು ತಿಳಿಯಲು ಒಂದು ಆಲಯಬೇಕು. ಆ ಬಳಿಕ ಆಲಯದಲ್ಲಿನ ಬಯಲು ತಿಳಿಯುವುದು ಸಾಧ್ಯ. ಈ ಆಲಯವೇ ಆವರಣ. ಇದನ್ನು ಸಾಮಾಜಿಕ ಅಥವಾ ಧಾರ್ಮಿಕ ಆಚರಣೆಯ ಚೌಕಟ್ಟು ಎನ್ನಬಹುದು. ಈ ಧಾರ್ಮಿಕ ಆಚರಣೆಯ ಚೌಕಟ್ಟಿಗೆ ಸೇರಿರುವ ಅಷ್ಟಾವರಣಗಳು ವೀರಶೈವ ಧರ್ಮಕ್ಕೆ ಕವಚದೋಪಾದಿಯಲ್ಲಿವೆ.

ಅಷ್ಟಾವರಣಗಳು ಕೇವಲ ಬಹಿರಂಗದ ಪರಿಕರಗಳಲ್ಲ, ಆಂತರಿಕ ಅರಿವು ಬಹಿರಂಗದ ರೂಪದಲ್ಲಿ ನಿಯೋಜಿತವಾಗಿದೆ ಎಂದು ಹೇಳಬಹುದು. ಅಂತರಂಗದ ಅಷ್ಟಾವರಣಗಳನ್ನು ಸಾಧನೆಗೆ ಸಹಾಯಕವಾಗುವಂತೆ ಬಹಿರಂಗ ಅಳವಡಿಸಿ ಕೊಂಡಿದ್ದಾರೆ. ಅಲ್ಲದೆ ಅಷ್ಟಾವರಣಗಳನ್ನು ಬಾಹ್ಯ ಅಷ್ಟಾವರಣ, ಆಂತರಿಕ ಅಷ್ಟಾವರಣ ಎಂದು ಗುರುತಿಸಲಾಗಿದೆ. ಬಾಹ್ಯ ಅಷ್ಟಾವರಣಗಳು ಕ್ರಿಯೆಗೆ ಸಂಬಂಧಿಸಿದ್ದರೆ ಆಂತರಿಕ ಅಷ್ಟಾವರಣಗಳು ಜ್ಞಾನಕ್ಕೆ ಸಂಬಂಧಿಸಿವೆ ಜ್ಞಾನ- ಕ್ರಿಯೆಗಳ ಸಾಮರಸ್ಯ ವೀರಶೈವ ಧರ್ಮದ ವೈಶಿಷ್ಟ್ಯ.

*ಬಹಿರಂಗದಲ್ಲಿ ಅಳವಡಿಸಿಕೊಂಡಿರುವ ಅಷ್ಟಾವರಣಗಳು ಒಟ್ಟು ಎಂಟು ಇವೆ.*

೧. ಗುರು : ಅಂಗದ ಮೇಲೆ ಲಿಂಗ ಸ್ವಾಯತ ಮಾಡುವವನು.
೨. ಲಿಂಗ : ತನುವಿನ ಮೇಲೆ ಧರಿಸುವುದು.
೩. ಜಂಗಮ : ಭಕ್ತಜನ ಹಿತೋಪದೇಶಾರ್ಥವಾಗಿ ಚಲಿಸುವವನು.
೪. ಪಾದೋದಕ : ಗುರುಲಿಂಗ ಜಂಗಮ ಪಾದದ ಕರುಣ ಜಲ.
೫. ಪ್ರಸಾದ : ಗುರುಲಿಂಗ ಜಂಗಮಗಳಿಗೆ ಅರ್ಪಿಸಿದ ಪ್ರಸಾದ.
೬. ವಿಭೂತಿ : ಪಂಚಗೋವುಗಳ ಗೋಮಯಗಳಿಂದ ಜನಿಸಿರುವುದು.
೭. ರುದ್ರಾಕ್ಷಿ : ಭಸ್ಮಧಾರಣದ ಜೊತೆಗೆ ಕೊರಳಲ್ಲಿ ಧರಿಸುವುದು.
೮. ಮಂತ್ರ : ಗುರುವು ಶಿಷ್ಯನಿಗೆ ಬೋಧಿಸುವ ಪಂಚಾಕ್ಷರೀ ಮಂತ್ರ ಅಥವಾ ಓಂ ಎಂಬ ಪ್ರಣವದೊಡನೆ ಸೇರಿದ ಷಡಕ್ಷರ ಮಂತ್ರ.

ಬಾಹ್ಯ ಅಷ್ಟಾವರಣಗಳನ್ನು ಇನ್ನೊಂದು ತೆರನಾಗಿ ಹೇಳುವುದಾದರೆ, ನಿರ್ಮಲವಾದ ಶರೀರವೇ ಗುರು, ಹರಿದಾಡುವ ಮನಸ್ಸನ್ನು ಇಷ್ಟಲಿಂಗದಲ್ಲಿ ತೊಡಗಿಸಿ ಪೂಜಿಸುವುದರಿಂದ, ಜಂಗಮ ಸೇವೆಯಿಂದ ಅನ್ನಮಯ ಶರೀರ ಜ್ಞಾನಮಯವಾಗುತ್ತದೆ. ಹೀಗೆ ತನುಮನ ಪ್ರಾಣಗಳನ್ನು ಪವಿತ್ರಗೊಳಿಸಿ ಆ ಭಾವನೆಯಿಂದ ಜಲವನ್ನು ಕುಡಿದರೆ ಅದೇ ಪಾದೋದಕ. ಪವಿತ್ರ ಭಾವನೆಯಿಂದ ಅನ್ನವನ್ನು ಸೇವಿಸಿದರೆ ಅದೇ ಪ್ರಸಾದ. ಪರಧನ ಪರಸೊತ್ತುಗಳ ಕಡೆಗೆ ಹೋಗುವ ಕಣ್ಣನ್ನು ಇಷ್ಟಲಿಂಗದ ಕಡೆಗೆ ತಿರುಗಿಸಿದರೆ ಆ ಕಣ್ಣೇ ರುದ್ರಾಕ್ಷಿ. ಶರಣರ ವಚನ, ಶಿವಸ್ತೋತ್ರ, ಪಂಚಾಕ್ಷರೀ ಮಂತ್ರಗಳನ್ನು ಗುರುಮುಖದಿಂದ ಕೇಳಿ ಕಿವಿಯನ್ನು ಪವಿತ್ರವಾಗಿಸುವುದೇ ಮಂತ್ರ.





ಆಂತರಿಕ ಅಷ್ಟಾವರಣಗಳ ಬಗೆಗಳನ್ನು ಇನ್ನೊಂದು ರೀತಿಯಲ್ಲಿ ಅರ್ಥೈಸಬಹುದು. ಅರಿವೇ ಗುರು, ಆತ್ಮವೇ ಲಿಂಗ, ಸುಜ್ಞಾನವೇ ಜಂಗಮ, ಅಂತಃಕರಣವೇ ಪಾದೋದಕ, ಪ್ರಸನ್ನ ಚಿತ್ತವೇ ಪ್ರಸಾದ. ದೈವೀ ಸಂಪತ್ತೇ ವಿಭೂತಿ. ಜ್ಞಾನನೇತ್ರವೇ ರುದ್ರಾಕ್ಷಿ ಪ್ರಣವ ನಾದವೇ ಮಂತ್ರ.

ಅಷ್ಟಾವರಣಗಳಲ್ಲಿ ಗುರುಲಿಂಗ ಜಂಗಮಗಳು ಪೂಜಾ ಮೂರ್ತಿಗಳು ಅಥವಾ ಉಪಾಸ್ಯ ವಸ್ತುತ್ರಯಗಳಾಗಿವೆ. ವಿಭೂತಿ, ರುದ್ರಾಕ್ಷಿ, ಮಂತ್ರಗಳು ಪೂಜಾ ಸಾಧನಗಳು ಅಥವಾ ಉಪಸನಾ ಸಾಧನಗಳು. ಪಾದೋದಕ ಪ್ರಸಾದಗಳು ಸಿದ್ಧರೂಪವಾದ ಪೂಜಾ ಫಲಗಳು ಅಥವಾ ಉಪಾಸನ ಫಲಗಳು. ಅಂಗಜೀವಿಯು ಗುರುಲಿಂಗ ಜಂಗಮರನ್ನು ಉಪಾಸ್ಯವಾಗಿಸಿ, ತಾನು ಉಪಾಸಕನಾಗಿಸಿ ಉಪಾಸನ ಸಾಧನಗಳನ್ನು ಹೊಂದಿ ದಾಸೋಹಂ ಭಾವದಿಂದ ಆಚರಿಸಿ ಉಪಾಸನ ಫಲಗಳನ್ನು ಪಡೆಯುತ್ತಾನೆ.

ಅಷ್ಟಾವರಣಗಳಲ್ಲಿ ಗುರು-ಲಿಂಗ-ಜಂಗಮಗಳು ಪ್ರಮುಖ ಸ್ಥಾನ ಪಡೆದಿವೆ. ತ್ರಿವಿಧ ದಾಸೋಹಕ್ಕೆ ಇವು ಆಧಾರ ಸ್ವರೂಪಗಳಾಗಿವೆ. ಸಾಧನೆಯ ನೆಲೆ, ಸಾಧ್ಯಮಾನವಾದ ಕುರುಹು ಮತ್ತು ಸಿದ್ಧಿಯ ನಿಲುವು ಈ ಮೂರು ಅಂಗಗಳನ್ನು ಇವು ಪ್ರತಿನಿಧಿಸುತ್ತವೆ. ಪಾದೋದಕ ಪ್ರಸಾದಗಳು ಇವುಗಳಿಂದ ಲಭ್ಯವಾದವುಗಳಾಗಿವೆ. ಹೀಗಾಗಿ ಅಷ್ಟಾವರಣಗಳಲ್ಲಿ ಒಂದು ವ್ಯವಸ್ಥಿತವಾದ ಕ್ರಮ ಇರುವುದರಿಂದ ಜೊತೆಗೆ ಪರಸ್ಪರ ಅವಲಂಬನೆಯ ಅನಿವಾರ್ಯತೆ ಕಂಡು ಬರುತ್ತದೆ.

### *ಪ್ರಮುಖ ವಚನಕಾರರ ವಚನಗಳಲ್ಲಿ ಪ್ರಸಾದವನ್ನು ಕುರಿತ ವಚನಗಳ ಸಂಖ್ಯೆ ಮತ್ತು ಪ್ರಸಾದವನ್ನು ಕುರಿತು ಕಾವ್ಯಗಳ ವಿವರ :*

ಬಸವಣ್ಣನವರ ವಚನಗಳಲ್ಲಿ ಪ್ರಸಾದವನ್ನು ಕುರಿತು ೨೦ ವಚನಗಳಲ್ಲಿಯೂ, ಚನ್ನಬಸವಣ್ಣನವರ ವಚನಗಳಲ್ಲಿ ೨೫೪. ಅಲ್ಲಮ ಪ್ರಭುದೇವರ ವಚನಗಳಲ್ಲಿ ೨೩, ಅಕ್ಕಮಹಾದೇವಿಯ ವಚನಗಳಲ್ಲಿ ೧೯, ಸಿದ್ಧರಾಮೇಶ್ವರ ವಚನಗಳಲ್ಲಿ ೫೫, ಜೇಡರ ದಾಸಿಮಯ್ಯನ ವಚನಗಳಲ್ಲಿ ೪, ಉರಿಲಿಂಗ ಪೆದ್ದಿಗಳ ವಚನಗಳಲ್ಲಿ ೮೫, ಆದಯ್ಯನ ವಚನಗಳಲ್ಲಿ ೨೩ ವಚನಗಳು ಪ್ರಸಾದದ ಬಗೆಗೆ ವಿವರಗಳನ್ನು ಒಳಗೊಂಡಿವೆ. ಪ್ರಸಾದವನ್ನು ಕುರಿತು ವೀರಶೈವ ಸೈದ್ಧಾಂತಿಕ ಹಿನ್ನೆಲೆಯಲ್ಲಿ ಚನ್ನಬಸವಣ್ಣನವರು ಉಳಿದ ವಚನಕಾರರಿಗಿಂತ ಹೆಚ್ಚು ವಚನಗಳಲ್ಲಿ ಸುದೀರ್ಘವಾಗಿ ವಿವರಿಸಿದ್ದಾರೆ. ವೀರಶೈವ ಕಾವ್ಯ ಪುರಾಣಗಳಲ್ಲಿ ಪ್ರಾಸಂಗಿಕವಾಗಿ 'ಪ್ರಸಾದ' ಉಲ್ಲೇಖ ದೊರೆಯುತ್ತದೆಯಾದರೂ ಪ್ರಸಾದವನ್ನು ಕುರಿತ ಪೂರ್ಣ ಪ್ರಮಾಣದ ಅಪ್ರಕಟಿತ ಕೃತಿಗಳು ಇವೆ.

ವೀರಣಾರ್ಯ ಎಂಬುವ ಪ್ರಸಾದ ಚಾರಿತ್ರ್ಯವನ್ನು, ಅನಾಮಧೇಯ ಕವಿಯೊಬ್ಬ ಪ್ರಸಾದದ ಮಹಾತ್ಮೆಯನ್ನು ರಚಿಸಿರುವುದಾಗಿಯೂ, ನೀಲಮ್ಮ ಎಂಬ ಕವಯತ್ರಿ ಪ್ರಸಾದ ಸಂಪಾದನೆಯ ಕೃತಿಯನ್ನು ರಚಿಸಿರುವುದಾಗಿ ಕವಿಚರಿತೆಯಲ್ಲಿ ಉಲ್ಲೇಖವಿದೆ. ದೇವರಾಯಪಟ್ಟಣದ ಕವಿಯಾದ ಶಂಕರ ಕವಿಯು ಪ್ರಸಾದವನ್ನು ಕುರಿತ ರಗಳೆ ಪ್ರಕಾರದಲ್ಲಿ ಕಾವ್ಯ ರಚಿಸಿದ್ದಾನೆ.

### *ಪ್ರಸಾದವನ್ನು ವೀರಶೈವ ಮತದಲ್ಲಿಯ ಅಷ್ಟಾವರಗಳಲ್ಲಿ ಸೇರಿಸಿರುವ ಉದ್ದೇಶ :*

ವೀರಶೈವ ಮತದಲ್ಲಿ ಪ್ರಸಾದವನ್ನು ಅಷ್ಟಾವರಣಗಳಡಿಯಲ್ಲಿ ಸೇರಿಸಿರುವಲ್ಲಿ ಸಾಮಾಜಿಕ ಅಥವಾ ತಾತ್ವಿಕ ಉದ್ದೇಶ್ಯವಿರುವಂತೆ ತೋರುತ್ತದೆ. ಮಾನವನಲ್ಲಿರುವ ದೈವತ್ವವನ್ನು ಗುರುತಿಸುವುದು. ಮತ್ತು ಆ ಸಹಜ ಅರಿವಿನ ಮೂಲಕ ದೈವತ್ವಕ್ಕೇರಲು ಸಾಧ್ಯ ಎಂಬುದನ್ನು ಬಹುಶಃ ಪಾದೋದಕ ಪ್ರಸಾದಗಳು ತೋರಿಸಿ ಕೊಟ್ಟಿರಬೇಕು ಎಂದೆನಿಸುತ್ತವೆ.

ವಚನಗಳು ಪ್ರಾದುರ್ಭಾವಗೊಳ್ಳುವ ಕಾಲದಲ್ಲಿ ಕಂಡುಬರುತ್ತಿದ್ದ ಬ್ರಾಹ್ಮಣ, ಕ್ಷತ್ರಿಯ ಇತ್ಯಾದಿ ಭೇದ, ಗಂಡು ಹೆಣ್ಣು ಎಂಬಂತಹ ಲಿಂಗಭೇದ, ಮೇಲು-ಕೀಳು, ಬಡವ- ಬಲ್ಲಿದ ಇತ್ಯಾದಿ ತರತಮಭಾವ ಇವೆಲ್ಲವುಗಳನ್ನು ಸಂಪೂರ್ಣವಾಗಿ ನಿರ್ಮೂಲನಗೊಳಿಸಿ ಸಮಾಜ ಮತ್ತು ಧರ್ಮಗಳೆರಡರಲ್ಲಿಯೂ ಸರ್ವಸಮಾನತೆ ಮತ್ತು ಭ್ರಾತೃತ್ವ ಮನೋಭಾವನೆಯನ್ನುಂಟು ಮಾಡುವುದು ವಚನಕಾರರ ಮುಖ್ಯ ಧ್ಯೇಯವಾಗಿದ್ದಿತು. ಅದನ್ನು ಸಾಧಿಸಲು ಪ್ರಸಾದ ಭೋಗದ ಆಚರಣೆಯನ್ನು ಬಹುಶಃ ಅಷ್ಟಾವರಣಗಳಲ್ಲಿ ಸೇರಿಸಿದಂತೆ ಕಂಡುಬರುತ್ತದೆ. ವ್ಯಕ್ತಿಯು ತನ್ನನ್ನು, ಸತ್ಯ ಶುದ್ಧ ಕಾಯಕದಿಂದ ಪಡೆದುದನ್ನು ಗರುಲಿಂಗ ಜಂಗಮಕ್ಕೆ ದಾಸೋಹದ ಮೂಲಕ ಅರ್ಪಿಸಿದಾಗ ಸಂಸ್ಕಾರ ಬಲದಿಂದ ತಾನೂ ಸಹಿತ ಸಮಸ್ತವೂ ಪ್ರಸಾದವಾಗಿ ಮಾರ್ಪಾಡು ಹೊಂದುತ್ತದೆ. ಕಾಯಕವೂ ಉತ್ಪಾದನೆಯನ್ನು ಪ್ರಸಾದವೂ ಅದರ ಸದ್ವಿನಿಯೋಗವನ್ನು ಸೂಚಿಸುತ್ತದೆ. ಕಾಯಕ ತತ್ವದಿಂದ ಬಂದುದನ್ನು ಹೇಗೆ ಸದ್ವಿನಿಯೋಗ ಮಾಡಬೇಕೆಂಬುದನ್ನು ದಾಸೋಹ ತತ್ವ ಹಾಗೂ ಪ್ರಸಾದದಲ್ಲಿ ಅಚ್ಚುಕಟ್ಟಾಗಿ ಅಳವಡಿಸಲಾಗಿದೆ. ಪ್ರಸಾದ ಸೇವನೆಯ ಸಂದರ್ಭದಲ್ಲಿ ಗುರು ಮತ್ತು ಭಕ್ತರು ಅವರು ಯಾವುದೆ ಜಾತಿ, ವೃತ್ತಿ ಅಂತಸ್ತಿಗೆ ಸೇರಿದವರಾಗಲೀ ಒಂದೇ ಸ್ಥಳದಲ್ಲಿ ಸೇರಿ ಪ್ರಸಾದ ಸೇವೆಯಲ್ಲಿ ಪಾಲುಗೊಳ್ಳುತ್ತಾರೆ. ಹೀಗಾಗಿ ಜಾತಿ ಮತ ಪಂಥ ಲಿಂಗ ಮತ್ತು ಅಂತಸ್ತುಗಳ ಭೇದವನ್ನು ಕಿತ್ತೆಸೆಯಲು ಪ್ರಸಾದತತ್ವ ಸಹಾಯಕವಾಗಿದೆ. ವಚನಕಾರರು ತಮಗಿಂತ ಪೂರ್ವದಲ್ಲಿ ಇದ್ದ ಹಳೆಯ ಸವಕಲು ಅರ್ಥದಲ್ಲೇ ತೊಳಲಾಡುತ್ತಿದ್ದ ಪದಗಳನ್ನು ಹೆಕ್ಕಿ ತೆಗೆದು ಅವು ಹೊಸ ಅರ್ಥದಲ್ಲಿ ಚೇತನಶೀಲವಾಗಿ ವಿಜೃಂಭಿಸುವಂತೆ ಮಾಡಿದ ಕೀರ್ತಿಗೆ ಭಾಜನರಾಗಿದ್ದಾರೆ. ಲೌಕಿಕ ಹಾಗೂ ಪಾರಮಾರ್ಥಿಕ ಎರಡನ್ನೂ ವ್ಯವಹಾರಿಕ ದೃಷ್ಟಿಯಲ್ಲಿ ಎಣೆದು ಪಟ್ಟಭದ್ರರ ಹಿಡಿತದಲ್ಲಿದ್ದ ದೈವೀಕಲ್ಪನೆಯನ್ನು ಸಾಮಾಜೀಕರಣಗೊಳಿಸಿ ಅದೇ ಮಾಧ್ಯಮದಿಂದ ವ್ಯಕ್ತಿ ಹಾಗೂ ಸಮಾಜವನ್ನು ಏಕಕಾಲಕ್ಕೆ ಶುದ್ಧೀಕರಿಸುವಲ್ಲಿ ಶರಣರು ಮಾಡಿದ ಕ್ರಾಂತಿ ಅತ್ಯದ್ಭುತವಾದುದು. ಅವರು ಕಟ್ಟಬಯಸಿದ ಆದರ್ಶ ಸಮಾಜದ ವಾಸ್ತವಿಕ ಕಲ್ಪನೆಯನ್ನು ಸಾಕಾರಗೊಳಿಸಲು ಪ್ರಸಾದ ತತ್ವವನ್ನು ಆಚರಣೆಗೆ ತಂದರು.

(ಮುಂದುವರಿಯುತ್ತದೆ)

# ಬ್ಯಾಲಕೆರೆಯಲ್ಲಿ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮ

ಶ್ರೀಮಠದ ಬಸವ ಜಯಂತಿ ಕಾರ್ಯಕ್ರಮಕ್ಕೆ ನಾಂದಿಹಾಡಿದ ಪುಣ್ಯ ಗ್ರಾಮ ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಬ್ಯಾಲಕೆರೆಯಲ್ಲಿ ಏಪ್ರಿಲ್ ೧೮, ೨೦೦೨ರಂದು ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮ ವಿಜೃಂಭಣೆಯಿಂದ ಆಚರಿಸಲಾಯಿತು.



ಪರಮಪೂಜ್ಯ ಶ್ರೀ ಶ್ರೀಗಳವರನ್ನು ಮೆರವಣಿಗೆಯಲ್ಲಿ ಬರಮಾಡಿಕೊಳ್ಳುತ್ತಿರುವುದು

ಕಾರ್ಯಕ್ರಮಕ್ಕೆ ಮುನ್ನ ವೇದಿಕೆಗೆ ಪರಮ ಪೂಜ್ಯ ಶ್ರೀ ಶ್ರೀಗಳವರನ್ನು ಮೆರವಣಿಗೆಯಲ್ಲಿ ಬರಮಾಡಿಕೊಳ್ಳಲಾಯಿತು. ಮುಂಜಾನೆ ಶ್ರೀ ಈಶ್ವರ ದೇವಾಲಯದ ನೂತನ ಕಟ್ಟಡದ ಉದ್ಘಾಟನಾ ಸಮಾರಂಭ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ಕುಮಾರಿ ಬಿ.ಎಸ್. ಸುಧಾ ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಆರಂಭವಾಯಿತು. ಶ್ರೀ ನಟರಾಜ್ ಸರ್ವರನ್ನು ಸ್ವಾಗತಿಸಿದರು.

ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಮಾಜಿ ಸಚಿವರಾದ ಶ್ರೀ ಸಿ.ಎಂ. ಉದಾಸಿ ಅವರು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶಾಸಕರು ಹಾಗೂ ಮಾಜಿ ಸಚಿವರಾದ ಶ್ರೀ ಎಸ್.ಎಸ್. ಪಾಟೀಲ್ ಅವರು ''ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಮಾಡಿದ ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿ ವಿಶ್ವದ ಇತಿಹಾಸದಲ್ಲೇ ಶ್ರೇಷ್ಠವಾದುದು. ಪ್ರಸ್ತುತ ಸಮಸ್ಯೆಗಳಿಗೆ ಬಸವಣ್ಣನರ ದಿವ್ಯ ಸಂದೇಶ, ಪರಿಹಾರ ನೀಡಬಲ್ಲದು' ಎಂದು ತಿಳಿಸಿದರು. ಇದೇ ಸಂದರ್ಭದಲ್ಲಿ ಅವರು 'ವಚನಜ್ಯೋತಿ' ಸಂಚಿಕೆಯನ್ನು ಬಿಡುಗಡೆ ಮಾಡಿದರು. ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎಸ್. ಚನ್ನಬಸವಯ್ಯ, ಜಿಲ್ಲಾ ಪಂಚಾಯಿತಿ ಸದಸ್ಯ ಶ್ರೀ ಚೆಲುವರಾಜು ಅವರು ಮಾತನಾಡಿದರು.

'ವಚನಕಾರರ ವಿಚಾರಕ್ರಾಂತಿ' ವಿಷಯವನ್ನು ಕುರಿತು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ಉಪನ್ಯಾಸ ನೀಡಿದರು. ವಚನ ಜ್ಯೋತಿ ಸಂಪಾದಕ ಶ್ರೀ ಎಸ್. ಪಿನಾಕಪಾಣಿ ಅವರು ಮಾತನಾಡಿದರು. ವೇದಿಕೆಯಲ್ಲಿ ಶಾಸಕರು ಹಾಗೂ ಮಾಜಿ ಸಚಿವರೂ ಆದ ಶ್ರೀ ಎಚ್.ಎಂ. ರೇವಣ್ಣ, ವೀರಶೈವ ಸಹಕಾರ ಬ್ಯಾಂಕ್‌ನ ಅಧ್ಯಕ್ಷರಾದ ಶ್ರೀ ಬಿ.ಎಸ್. ಪರಮಶಿವಯ್ಯ ಹಾಗೂ ಹಲವಾರು ಮಠಗಳ ಹರಗುರು ಚರಮೂರ್ತಿಗಳು ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ಶ್ರೀ ಬಿ.ಆರ್. ಶಿವಣ್ಣ ಹಾಗೂ ಶ್ರೀ ರೇಣುಕಾರಾಧ್ಯ ಅವರನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಶಾಲು ಹೊದಿಸಿ ಫಲತಾಂಬೂಲ ಹಾಗೂ ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು.

ಸಮಾರಂಭದ ದಿವ್ಯ ಸಾನ್ನಿಧ್ಯವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು ತಮ್ಮ ಆಶೀರ್ವಚನದಲ್ಲಿ ''ದೇಶ ಇಂದು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ. ಎಲ್ಲಾ ಕ್ಷೇತ್ರಗಳಲ್ಲಿ ಭ್ರಷ್ಟಾಚಾರ ತುಂಬಿದೆ. ಮನುಷ್ಯ ಮಾನವೀಯತೆಯನ್ನು ಮರೆತಿದ್ದಾನೆ. ಜನರು ಸೋಮಾರಿಗಳಾಗುತ್ತಿದ್ದಾರೆ'' ಎಂದು ತಿಳಿಸಿ ''ಆರೋಗ್ಯವಂತ ಸಮಾಜ ನಿರ್ಮಾಣ ಮಾಡಲು ಬಸವಣ್ಣನವರ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು'' ಎಂದು ಕರೆನೀಡಿದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನೆರವಿನಿಂದ ವಚನಜ್ಯೋತಿ ಬಳಗದವರು ವಚನ ಗಾಯನ ಕಾರ್ಯಕ್ರಮ ನಡೆಸಿಕೊಟ್ಟರು. ಕಾರ್ಯಕ್ರಮದಲ್ಲಿ ಭಾಗವಹಿಸಿದವರಿಗೆಲ್ಲ ಪ್ರಸಾದ ವ್ಯವಸ್ಥೆ ಮಾಡಲಾಗಿತ್ತು.







ಮಾಜಿ ಸಚಿವ ಶ್ರೀ ಎಸ್.ಎಸ್. ಪಾಟೀಲ್ ಅವರೊಂದಿಗೆ ಆತ್ಮೀಯ ಸಂಭಾಷಣೆಯಲ್ಲಿ ಶ್ರೀ ಶ್ರೀಗಳವರು

## *ಬಸವ ಜಯಂತಿ ಕಾರ್ಯಕ್ರಮ*

ಮಧ್ಯಾಹ್ನ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಮಹಾಮನೆಯ ಸಂಪಾದಕರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರು 'ಶರಣ ಸಾಹಿತ್ಯ'ವನ್ನು ಕುರಿತು, ಸಿದ್ಧಗಂಗಾ ಮಾಸ ಪತ್ರಿಕೆಯ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯನವರು 'ಜಾನಪದದಲ್ಲಿ ವಚನಕಾರರು' ವಿಷಯವನ್ನು ಕುರಿತು ಸೋದಾಹರಣವಾಗಿ ಉಪನ್ಯಾಸ ನೀಡಿದರು.

ಸಮಾರಂಭದ ಅಧ್ಯಕ್ಷತೆಯನ್ನು ಮಾಜಿ ಶಾಸಕರಾದ ಶ್ರೀ ಎಚ್.ಸಿ. ಬಾಲಕೃಷ್ಣ ಅವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಹಿರಿಯ ಕೆ.ಎ.ಎಸ್. ಅಧಿಕಾರಿಗಳಾದ ಶ್ರೀ ಎಂ.ಎಸ್. ನಾಗೇಂದ್ರ, ಮಾಜಿ ಸೆನೆಟ್ ಸದಸ್ಯರಾದ ಶ್ರೀ ಪುಟ್ಟಣ್ಣ ಅವರು ಆಗಮಿಸಿದ್ದರು.

ಪೂಜ್ಯ ಶ್ರೀ ಶ್ರೀಗಳವರು ತಮ್ಮ ಅನುಗ್ರಹ ನುಡಿಗಳಲ್ಲಿ ''ಎಂಟುನೂರು ವರ್ಷಗಳ ಹಿಂದೆ ಬಸವಣ್ಣನವರು ಮಾಡಿದ ಸಾಮಾಜಿಕ ಕ್ರಾಂತಿ ವಿಶ್ವಮಾನ್ಯವಾದುದು. ಅವರ ಸಿದ್ಧಾಂತ, ಆದರ್ಶ ಜೀವನ ಎಲ್ಲರಿಗೂ ಅನುಕರಣೀಯ. ಇವತ್ತಿನ ಅನೇಕ ಸಮಸ್ಯೆಗಳಿಗೆ ಬಸವಣ್ಣನವರ ತತ್ವಗಳು ಪರಿಹಾರವನ್ನು ನೀಡಬಲ್ಲವು. ಜನರಲ್ಲಿ ವಿಚಾರ ಜ್ಯೋತಿಯನ್ನು ಹಚ್ಚಿದ ಬಸವಣ್ಣನವರು ಒಬ್ಬ ಮಹಾ ಮಾನವತಾವಾದಿ. ಅವರು ನೀಡಿದ ಕೊಡುಗೆ ವಿಶ್ವವ್ಯಾಪಿಯಾದುದು' ಎಂದು ನುಡಿದರು.



ಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸುವುದರ ಮೂಲಕ ಬಸವಜಯಂತಿ ಕಾರ್ಯಕ್ರಮ ಉದ್ಘಾಟನೆ

ರಾತ್ರಿ ಶ್ರೀಮಠದ ಕಲಾವಿದರಿಂದ 'ಜಗಜ್ಯೋತಿ ಬಸವೇಶ್ವರ' ನಾಟಕವನ್ನು ಪೂಜ್ಯ ಶ್ರೀ ಶ್ರೀಗಳವರ ಸಾನ್ನಿಧ್ಯದಲ್ಲಿ ಪ್ರದರ್ಶಿಸಲಾಯಿತು. ನಾಟಕವನ್ನು ಸಾವಿರಾರು ಜನ ಗ್ರಾಮೀಣ ಬಂಧುಗಳು ವೀಕ್ಷಿಸಿ ಸಂತೋಷ, ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

ವರದಿ : ಬಿ.ಎಸ್. ದಯಾನಂದ ಸ್ವಾಮಿ

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೫೭೪. | ಶ್ರೀ ಬಿ.ಟಿ. ರುದ್ರಮ್ಮ<br>ಮಾಜಿ ವಿಧಾನ ಪರಿಷತ್ ಸದಸ್ಯರು<br>ಭೀಮ ಸಮುದ್ರ, ಚಿತ್ರದುರ್ಗ ತಾ\|\| | ೫,೦೦೧.೦೦ |
| ೫೭೫. | ಶ್ರೀ ಬಿ.ಟಿ. ಚನ್ನಬಸಪ್ಪ<br>ವಿಧಾನ ಪರಿಷತ್ ಸದಸ್ಯರು<br>ಭೀಮಸಮುದ್ರ, ಚಿತ್ರದುರ್ಗ ತಾ\|\| | ೫,೦೦೧.೦೦ |
| ೫೭೬. | ಶ್ರೀಮತಿ ದೇವೀರಮ್ಮ ಕೋಂ.<br>ಕೆ.ಆರ್. ಜಂಬುಕೇಶ್ವರ<br>ಚಿತ್ರದುರ್ಗ – ೫೭೭೫೦೧ | ೫,೦೦೧.೦೦ |
| ೫೭೭. | ಶ್ರೀ ಯಜಮಾನ್ ಚಿಕ್ಕವೀರಪ್ಪ<br>ರಘುವನಹಳ್ಳಿ, ತಲಗಟ್ಟಪುರ ಅಂಚೆ<br>ಬೆಂಗಳೂರು ದಕ್ಷಿಣ ತಾಲ್ಲೂಕು | ೩,೭೨೦.೦೦ |
| ೫೭೮. | ಶ್ರೀಮತಿ ಹೊನ್ನಮ್ಮ ಕೋಂ.<br>ಹೆಚ್.ಎ. ಸದಾಶಿವಯ್ಯ<br>ಹುಲಿಕುಂಟೆ, ದೊಡ್ಡಬಳ್ಳಾಪುರ ತಾಲ್ಲೂಕು<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೧.೦೦ |
| ೫೭೯. | ಶ್ರೀ ವೈ.ಎಸ್. ಮುದ್ದವೀರಯ್ಯ<br>ನಿವೃತ್ತ ಶಿಕ್ಷಕರು, ಯಡೇಹಳ್ಳಿ,<br>ಬೆಟ್ಟಹಳ್ಳಿಮಠ ಅಂಚೆ, ಕುಣಿಗಲ್ ತಾ\|\|<br>ತುಮಕೂರು ಜಿಲ್ಲೆ. | ೨,೦೦೫.೦೦ |
| ೫೮೦. | ಶ್ರೀ ಎ. ರುದ್ರಪ್ಪ ಬಿನ್ ಪಿ.ಎ.ಕೆ. ಉರಿಯಪ್ಪ,<br>ರಂಗೂಲಿಹಳ್ಳಿ, ರಕ್ಷಣಾಪುರಂ,<br>ಹಳೇ ಅಂಚೇ ಕಛೇರಿ ರಸ್ತೆ,<br>ಹಾಸನ – ೫೭೩೨೦೧ | ೧,೪೦೧.೦೦<br>(೨ನೇ ಕಂತು) |
| ೫೮೧. | ಶ್ರೀ ಕೆ. ನಾಗರಾಜು<br>ಗೆಜಿಟೆಡ್ ಆಫೀಸರ್, ಉಪ ಖಜಾನೆ<br>ಹೊಸಕೋಟೆ, ಬೆಂ.ಗ್ರಾಂ. ಜಿಲ್ಲೆ. | ೧,೦೦೧.೦೦<br>(೨ನೇ ಕಂತು) |
| ೫೮೨. | ಶ್ರೀಮತಿ ಹೆಚ್.ಎಸ್. ಸಿದ್ಧಗಂಗಮ್ಮ<br>ಮುಖ್ಯಸ್ಥರು, ಸಮಾಜಶಾಸ್ತ್ರ ವಿಭಾಗ<br>ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು<br>ಬಿ.ಹೆಚ್. ರೋಡ್, ತುಮಕೂರು | ೬,೦೦೩.೦೦<br>(೭, ೮, ೯ನೇ ಕಂತು) |
| ೫೮೩. | "ಶ್ರೀ ಮೈತ್ರೀ ಮಹಿಳಾ ಸಂಘ"<br>ತುಮಕೂರು. | ೧೦,೦೦೦.೦೦ |
| ೫೮೪. | ಶ್ರೀ ಪಿ. ಪರಮಶಿವಯ್ಯ<br>ಉಲ್ಲಾಳು, ಉಲ್ಲಾಳು ಉಪನಗರ ಅಂಚೆ,<br>ಬೆಂಗಳೂರು ಉತ್ತರ ತಾಲ್ಲೂಕು<br>ಬೆಂಗಳೂರು ನಗರ ಜಿಲ್ಲೆ. | ೧,೦೦೦.೦೦ |
| ೫೮೫. | ಶ್ರೀ ಸಿ. ಶಂಕರಪ್ಪ, ಡಿ.ಇ.ಇ.,<br>ನಿವೃತ್ತ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್<br>"ವಿರೇಶ ನಿಲಯ" ನಂ. ೮೫೬/೬೩,<br>೩ನೇ ಮುಖ್ಯರಸ್ತೆ ೩ನೇ ಕ್ರಾಸ್, ೨ನೇ ಹಂತ<br>'ಡಿ' ಬ್ಲಾಕ್, ರಾಜಾಜಿನಗರ,<br>ಬೆಂಗಳೂರು ೫೬೦ ೦೧೦. | ೨,೦೦೧.೦೦ |
| ೫೮೬. | ಶ್ರೀ ಡಿ.ವಿ. ಶ್ರೀಕಂಠಯ್ಯ<br>ನಂ. ೫, 'ಮಾತೃ ಕೃಪ',<br>ಎನ್.ಎಸ್. ಐಯ್ಯಂಗಾರ್ ಸ್ಟ್ರೀಟ್<br>ಶೇಷಾದ್ರಿಪುರಂ, ಬೆಂಗಳೂರು.<br>ದಿ. ಡಿ.ಎನ್. ವೀರಪ್ಪ ಮತ್ತು<br>ಶ್ರೀಮತಿ ಡಿ.ಎನ್. ಸ್ವರ್ಣಾಂಬ ಇವರ ಸ್ಮರಣಾರ್ಥ | ೫,೦೦೧.೦೦ |
| ೫೮೭. | ಶ್ರೀ ಡಿ.ವಿ. ಚಂದ್ರಶೇಖರಯ್ಯ<br>ನಂ. ೧೬/೧೬ (೧೩), ೬ನೇ ಕ್ರಾಸ್<br>೧ನೇ ಮುಖ್ಯರಸ್ತೆ (೬೦ ಅಡಿ ರಸ್ತೆ), ಶಿವನಗರ<br>ರಾಜಾಜಿನಗರ, ಬೆಂಗಳೂರು.<br>(ದಿ. ಡಿ.ಎನ್. ವೀರಪ್ಪ ಮತ್ತು<br>ಶ್ರೀಮತಿ ಡಿ.ಎನ್. ಸ್ವರ್ಣಾಂಭ ಇವರ ಸ್ಮರಣಾರ್ಥ) | ೫,೦೦೧.೦೦ |
| ೫೮೮. | ಶ್ರೀಮತಿ ಗಿರಿಜಾಂಬ ನಂಜುಂಡಪ್ಪ<br>ನಂ. ೫, 'ಮಾತೃಕೃಪ'<br>ಎನ್.ಎಸ್. ಅಯ್ಯಂಗಾರ್ ಸ್ಟ್ರೀಟ್,<br>ಶೇಷಾದ್ರಿಪುರಂ, ಬೆಂಗಳೂರು. | ೫,೦೦೧.೦೦ |
| ೫೮೯. | ಶ್ರೀ ಟಿ.ಕೆ. ಶಿವಲಿಂಗಪ್ಪ<br>ಮಾರ್ಕೆಟಿಂಗ್ ಅಸಿಸ್ಟೆಂಟ್<br>ನಂ. ೯೮, ೫ನೇ ಕ್ರಾಸ್, ಲೇಬರ್ ಕಾಲೋನಿ<br>ನಿಟ್ಟುವಳ್ಳಿ ರಸ್ತೆ, ದಾವಣಗೆರೆ. | ೨,೦೦೦.೦೦ |
| ೫೯೦. | ಶ್ರೀಮತಿ ನಾಗಲಾಂಬಿಕೆ ಮಲ್ಲಪ್ಪ<br>ದಿ. ಮಲ್ಲಪ್ಪ ಮತ್ತು ಮಕ್ಕಳು<br>ನಂ. ೬೬೩, ಚಿಕ್ಕಪೇಟೆ, ಬೆಂಗಳೂರು<br>(ದಿ. ಮಲ್ಲಪ್ಪ ನ್ಯೂ ಮಾರ್ಕೆಟ್, ಇವರ ಸ್ಮರಣಾರ್ಥ) | ೫,೦೫೧.೦೦ |
| ೫೯೧. | ಶ್ರೀ ಬಿ.ಸಿ. ಬಸವರಾಜ್<br>ನಂ. ೨೩, "ಸಿದ್ಧರಕೃಪ", ೧ನೇ ಬ್ಲಾಕ್<br>ಕುವೆಂಪುನಗರ, ಮೈಸೂರು–೫೭೦೦೨೩. | ೫,೦೦೧.೦೦ |
| ೫೯೨. | ಶ್ರೀ ಸುಹಾಸಾರಾಧ್ಯ<br>ಬಿನ್ ಎಂ.ಎಸ್. ಸಿ. ಆರಾಧ್ಯ<br>ನಂ. ೫೧/೧, ೮ನೇ ಮುಖ್ಯರಸ್ತೆ,<br>ಬಿ.ಇ.ಎಂ.ಎಲ್. ಲೇ ಔಟ್, ೩ನೇ ಹಂತ<br>೪ನೇ ಬ್ಲಾಕ್ ಬಸವೇಶ್ವರನಗರ, ಬೆಂಗಳೂರು. | ೧,೦೦೧.೦೦ |
| ೫೯೩. | ಶ್ರೀ ಬಿ.ಎಲ್. ಸಿದ್ದಯ್ಯ<br>ನಿವೃತ್ತ ಮುಖ್ಯ ಶಿಕ್ಷಕರು,<br>'ಶ್ರೀ ಗೌರಿಶಂಕರ ಕೃಪ', ರಿಮ್ಯಾಂಡ್ ಹೋಮ್<br>ಎದುರುಗಡೆ, ಗೌರ್ನಮೆಂಟ್ ಕಾಲೇಜು ಬಡಾವಣೆ<br>ತುಮಕೂರು – ೫೭೨೧೦೩. | ೨,೦೦೦.೦೦ |
| ೫೯೪. | ಶ್ರೀ ಗುರುದೊಡ್ಡಬಸವರಾಯರು<br>ಜ್ಯೂನಿಯರ್ ಇಂಜಿನಿಯರ್,<br>ವೆಂಕಟೇಶ್ವರ ಕಾಲೋನಿ, ರಾಯಚೂರು. | ೧,೦೦೦.೦೦<br>(೧ನೇ ಕಂತು) |
| ೫೯೫. | ಶ್ರೀ ಬಿ. ಪರಮೇಶ್ವರಪ್ಪ<br>ಎಕ್ಸಿಕ್ಯೂಟೀವ್ ಇಂಜಿನಿಯರ್,<br>ಕೆ.ಪಿ.ಟಿ.ಸಿ.ಎಲ್., ದಾಂಡೇಲಿ<br>ಉತ್ತರ ಕನ್ನಡ ಜಿಲ್ಲೆ– ೫೮೧೩೨೫. | ೧,೦೦೦.೦೦<br>(೨ನೇ ಕಂತು) |
| ೫೯೬. | ಶ್ರೀ ವಿ. ಶ್ರೀಕಂಠಯ್ಯ<br>ನಂ. ೩೪೩, ೮ನೇ ಮುಖ್ಯರಸ್ತೆ,<br>ಕುವೆಂಪುನಗರ, ಮೈಕೋ, ಬಿ.ಟಿ.ಎಂ. ೨ನೇ ಹಂತ,<br>ಬೆಂಗಳೂರು– ೫೬೦ ೦೭೬. | ೨,೦೦೧.೦೦ |
| ೫೯೭. | ಸಂಚಾಲಕರು, ಸಂಯುಕ್ತ ವಿದ್ಯಾರ್ಥಿ ಸಂಘ<br>ಸನಿವಾಸ ವಿದ್ಯಾಸಂಸ್ಥೆಗಳು<br>ಶ್ರೀ ಸಿದ್ಧಗಂಗಾ ಮಠ – ೪. | ೧೦,೦೦೦.೦೦ |
| ೫೯೮. | ಶ್ರೀ ಎನ್.ಹೆಚ್. ಪುಟ್ಟಲಿಂಗಯ್ಯ<br>ನಂ. ೧೮, ೧೬ನೇ ಕ್ರಾಸ್, ಜೆ.ಪಿ. ನಗರ<br>೪ನೇ ಫೇಸ್, ಬೆಂಗಳೂರು – ೭೮. | ೧,೦೦೦.೦೦<br>(೧ನೇ ಕಂತು) |
| ೫೯೯. | ಶ್ರೀ ಕೆ. ಲಿಂಗದೇವರು<br>ನಂ. ೮೩೦, ೪ನೇ ಮುಖ್ಯರಸ್ತೆ,<br>ವಿಜಯನಗರ, ಬೆಂಗಳೂರು – ೪೦. | ೧,೦೦೦.೦೦<br>(೨ನೇ ಕಂತು) |
| ೬೦೦. | ಶ್ರೀ ಎಂ.ಜಿ. ಶಿವಲಿಂಗಯ್ಯ<br>ಬಿನ್ ಬಿ. ಗಿರಿಯಪ್ಪ<br>ಕೆ.ಎಸ್.ಆರ್.ಟಿ. ಕ್ಯಾಷಿಯರ್,<br>ಮಂಚಿಹಳ್ಳಿ, ಬಿದ್ದುಗೊಂಡನಹಳ್ಳಿ ಅಂಚೆ,<br>ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. | ೨,೦೦೧.೦೦ |
| ೬೦೧. | ಶ್ರೀ ಬಿ.ಕೆ. ಲಿಂಗಯ್ಯ ಮತ್ತು<br>ಶ್ರೀಮತಿ ಶಾರದಮ್ಮ<br>ಸುಭಾಷ್‌ನಗರ, ನೆಲಮಂಗಲ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೦.೦೦ |
| ೬೦೨. | ವಿದ್ಯಾರ್ಥಿಗಳು ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ<br>ಹೆಡಕನಹಳ್ಳಿ, ಹೊಸಕೋಟೆ ತಾಲ್ಲೂಕು<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೯೪೦.೦೦ |
| ೬೦೩. | ಮಿ. ಸುಬಜಿತ್‌ಸೇನ್, ಬೆಂಗಳೂರು<br>ಕೇರಾಫ್. ಪ್ರೊ. ಮಾಲತಿ ಬೋಲಾರ್,<br>ಸಿದ್ಧಗಂಗಾ ಇನ್ಸಿಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್<br>ತುಮಕೂರು – ೫೭೨ ೧೦೩. | ೫,೦೦೦.೦೦ |
| ೬೦೪. | ಶ್ರೀ ವೆಂಕಟರಮಣಯ್ಯ<br>ನಂ. ೧೪೬/ಸಿ, ೬ನೇ 'ಸಿ' ಮುಖ್ಯರಸ್ತೆ,<br>೩೦ನೇ ಕ್ರಾಸ್, ೪ನೇ ಬ್ಲಾಕ್, ಜಯನಗರ<br>ಬೆಂಗಳೂರು ೫೬೦ ೦೧೧. | ೧೦,೦೦೧.೦೦ |
| ೬೦೫. | ಶ್ರೀ ಟಿ.ಕೆ. ಚಿಕ್ಕಣ್ಣ<br>ನಂ. ೫೬, ೧೦ನೇ ಕ್ರಾಸ್, ಬಿ.ಟಿ.ಎಸ್. ಮುಖ್ಯರಸ್ತೆ,<br>ವಿಲ್ಸನ್‌ಗಾರ್ಡನ್ ಬೆಂಗಳೂರು–೨೭. | ೨೦,೦೦೧.೦೦ |
| ೬೦೬. | ಶ್ರೀ ಲೋಕೇಶ್‌ಮೂರ್ತಿ<br>ಬಿನ್ ದೊಡ್ಡವೀರಯ್ಯ<br>ನಂ. ೧೨೧೨, ಚಿಕ್ಕಗಂಗವಾಡಿ,<br>೩ನೇ ಮುಖ್ಯರಸ್ತೆ, ಚಂದ್ರಾಬಡಾವಣೆ<br>ಬೆಂಗಳೂರು – ೫೬೦ ೦೪೦. | ೯,೦೦೧.೦೦ |
| ೬೦೭. | ಶ್ರೀ ಎನ್.ಎಸ್. ನಂಜಪ್ಪ<br>ನಂ. ೬೭, ಶಿವಕೃಪ, ೭ನೇ ಮುಖ್ಯರಸ್ತೆ,<br>ಶಂಕರನಗರ, ಜೆ.ಬಿ. ಕಾವಲ್<br>ಬೆಂಗಳೂರು – ೫೬೦ ೦೯೬. | ೨,೫೦೧.೦೦ |
| ೬೦೮. | ಶ್ರೀ ಜಿ.ಎಸ್. ಶಿವಣ್ಣ<br>ನೇ. ೩, ಬಸವೇಶ್ವರ ನಿಲಯ, ಯಲಚೇನಹಳ್ಳಿ<br>ಜೆ.ಪಿ. ನಗರ ಅಂಚೆ, ಬೆಂಗಳೂರು – ೭೮. | ೯೦೦.೦೦ |
| ೬೦೯. | ಶ್ರೀ ಸಿ.ಎನ್. ನವೀನ್<br>೪ನೇ ಮುಖ್ಯರಸ್ತೆ, ಸಿದ್ಧಗಂಗಾ ಬಡಾವಣೆ<br>ತುಮಕೂರು – ೫೭೨ ೧೦೨. | ೨.೫೦೧.೦೦ |
| ೬೧೦. | ಕು. ಜಿ.ಆರ್. ಅನುಪಮ ಬಿನ್ ಜಿ.ಸಿ. ರಾಜಣ್ಣ<br>೪ನೇ ಮುಖ್ಯರಸ್ತೆ, ಸಿದ್ಧಗಂಗಾ ಬಡಾವಣೆ,<br>ತುಮಕೂರು – ೫೭೨೧೦೨. | ೨,೫೦೧.೦೦ |
| ೬೧೧. | ಶ್ರೀ ಎನ್. ಸೋಮಶೇಖರ ಆರಾಧ್ಯ<br>ಬಿನ್ ಎಂ.ಎನ್. ನಂಜುಂಡಾರಾಧ್ಯ<br>ನಂ. ೩೫೬, ೩ನೇ ಡಿವಿಜನ್,<br>ಡಿ.ವಿ.ಟಿ. ಪೇಟೆ, ಚಿಕ್ಕಬಳ್ಳಾಪುರ. | ೧,೦೦೦.೦೦<br>(೨ನೇ ಕಂತು) |

(ಮುಂದುವರಿಯುತ್ತದೆ)

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೩೪೪. | **ಶ್ರೀ ಸಿದ್ಧಲಿಂಗಯ್ಯ ಬಿನ್ ಬಸವಣ್ಣ**<br>ನಿವೃತ್ತ ಶಿಕ್ಷಕರು, ಕೆಂಬಳಲು<br>ತುಮಕೂರು ತಾಲ್ಲೂಕು ಮತ್ತು ಜಿಲ್ಲೆ. | ೧,೦೦೧.೦೦ |
| ೩೪೫. | **ಶ್ರೀ ಕೆ. ವೀರಭದ್ರಯ್ಯ**<br>ಉಪ-ಪ್ರಾಂಶುಪಾಲರು,<br>ಶ್ರೀ ಸಿದ್ಧಗಂಗಾ ಪ್ರೌಢಶಾಲಾ ವಿಭಾಗ<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೧.೦೦ |
| ೩೪೬. | **ಶ್ರೀಮತಿ ಸುನಂದ ಈಶ್ವರಯ್ಯ**<br>ಇಂಜಿನಿಯರ್, 'ಬಸವಕೃಪ'<br>೫ನೇ ಮುಖ್ಯರಸ್ತೆ, ಅಶೋಕನಗರ<br>ತುಮಕೂರು. | ೧,೦೦೦.೦೦ |
| ೩೪೭. | **ಶ್ರೀ ಹೆಚ್. ಮೃತ್ಯುಂಜಯ**<br>ಪತ್ರಕರ್ತ, ನಂ. ೯೯/೧೦೪,<br>ಮಂಜುನಾಥ ನಿಲಯ, ೧೫ನೇ ಅಡ್ಡರಸ್ತೆ,<br>ಜೆ.ಡಿ. ಪಾರ್ಕ್, ವಯ್ಯಾಲಿಕಾವಲ್<br>ಬೆಂಗಳೂರು – ೫೬೦ ೦೦೩. | ೧,೧೧೧.೦೦ |
| ೩೪೮. | **ಶ್ರೀ ನಾಗರಾಜು, ಹೆಚ್. ರಾಯಕರ್**<br>**ಬಿನ್ ಹರಿನಾರಾಯಣ್, ಟಿ. ರಾಯಕರ್**<br>ನಂ. ೨೯೪, ೧ನೇ ಕ್ರಾಸ್, ಎನ್‌ಎಸ್. ಪಾಳ್ಯ,<br>ಬನ್ನೇರುಘಟ್ಟ ರಸ್ತೆ, ಬೆಂಗಳೂರು – ೭೬. | ೧,೧೦೧.೦೦ |
| ೩೪೯. | **ಶ್ರೀ ಸಿದ್ಧಪ್ಪದೇವರು ಬಿನ್ ಸಿದ್ಧಪ್ಪ**<br>ಬೇರಂಬಾಡಿ ಆಟ್ ಅಂಡ್ ಪೋಸ್ಟ್,<br>ಗುಂಡ್ಲುಪೇಟೆ ತಾಲ್ಲೂಕು<br>ಚಾಮರಾಜನಗರ ಜಿಲ್ಲೆ. | ೧,೦೦೧.೦೦ |
| ೩೫೦. | **ಶ್ರೀಮತಿ ಹರಿಣಿ ಪ್ರಕಾಶ್**<br>ನಂ. ೩೯೮/ಸಿ, ೯ನೇ ಮುಖ್ಯರಸ್ತೆ,<br>ವಿಜಯನಗರ, ಬೆಂಗಳೂರು – ೪೦. | ೧,೦೦೧.೦೦ |
| ೩೫೧. | **ಶ್ರೀ ಗುರುಸಿದ್ಧಪ್ಪ**<br>ಶಿಕ್ಷಕರು, ಹೊಸ ಬಡಾವಣೆ,<br>೫ನೇ ಕ್ರಾಸ್, ಗುಬ್ಬಿ, ತುಮಕೂರು ಜಿಲ್ಲೆ. | ೧,೦೦೧.೦೦ |
| ೩೫೨. | **ಶ್ರೀಮತಿ ಶ್ರೀ ನಾಗರತ್ನ ಮತ್ತು ಮಹೇಶ್ವರಯ್ಯ**<br>ಶ್ರೀ ಸಿದ್ಧರಾಮೇಶ್ವರ ನಿಲಯ,<br>೧೨ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ<br>ತುಮಕೂರು – ೩. | ೧,೦೦೧.೦೦ |
| ೩೫೩. | **ಶ್ರೀ ಆರ್. ಹೊನ್ನಗಂಗಯ್ಯ**<br>ನಂ. ೬, ೬ನೇ 'ಎ' ಕ್ರಾಸ್,<br>೯ನೇ ಮುಖ್ಯರಸ್ತೆ, ಕೆ.ಎಸ್. ಬಡಾವಣೆ<br>ಬೆಂಗಳೂರು. | ೧,೦೦೧.೦೦ |
| ೩೫೪. | **ಶ್ರೀ ಕೆ.ಪಿ. ಗಂಗಾಧರಯ್ಯ**<br>ನಂ. ೨೨೩, ಎಂ.ಜಿ. ರಸ್ತೆ,<br>ಕನಕಪುರ – ೫೬೨ ೧೧೭. | ೧,೦೦೧.೦೦ |
| ೩೫೫. | **ಶ್ರೀ ಜಿ. ಗಂಗಾಧರಯ್ಯ**<br>ಕೆ.ಪಿ.ಟಿ.ಸಿ.ಎಲ್. ನಂ. ೩೩೮೩/೨೬೬೭,<br>ಪರಮಣ್ಣ ಲೇ ಔಟ್, ನೆಲಮಂಗಲ<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೩೫೬. | **ಶ್ರೀ ಎ.ಪಿ. ರುದ್ರಪ್ಪ**<br>ನಂ. ೧೯೨, ೧೧ನೇ ಕ್ರಾಸ್,<br>ಶಿವಾಜಿ ರಸ್ತೆ, ಎನ್.ಆರ್. ಮೊಹಲ್ಲಾ<br>ಮೈಸೂರು. | ೫೦೦.೦೦<br>(೨ನೇ ಕಂತು) |
| ೩೫೭. | **ಶ್ರೀ ಕೆ.ಸಿ. ಚಿಕ್ಕಣ್ಣ**<br>ಮುಖ್ಯ ಶಿಕ್ಷಕರು,<br>ಕೋಳಾಲ ಆಟ್ ಅಂಡ್ ಪೋಸ್ಟ್,<br>ಊರ್ಡಿಗೆರೆ, ತುಮಕೂರು. | ೧,೦೦೧.೦೦ |
| ೩೫೮. | **ಶ್ರೀಬಸವರಾಜಪ್ಪ ಬಿನ್ ಬಸಪ್ಪ**<br>ಆನಗಟ್ಟಿ ಗ್ರಾಮ, ಕೆ.ಜಿ. ಹಳ್ಳಿ ಅಂಚೆ,<br>ಹೆಗ್ಗಡದೇವನಕೋಟೆ ತಾಲ್ಲೂಕು<br>ಮೈಸೂರು ಜಿಲ್ಲೆ. | ೫೦೧.೦೦<br>(೧ನೇ ಕಂತು) |
| ೩೫೯. | **ಶ್ರೀ ಹೆಚ್. ಜಮರಾಮ್**<br>**ಬಿನ್ ಮಾಸ್ತಿಗೌಡ,**<br>ಪೇಪರ್ ಟೌನ್, ಭದ್ರಾವತಿ<br>ಶಿವಮೊಗ್ಗ ಜಿಲ್ಲೆ. | ೧,೦೦೧.೦೦ |
| ೩೬೦. | **ಶ್ರೀ ಹೆಚ್.ಜಿ. ಗುರುಪ್ರಸಾದ್**<br>ಹೊಂಬೆಳಗು, ನಂ. ೧೧೧೫, ೧ನೇ ಕ್ರಾಸ್<br>ಲಲಿತಾದ್ರಿ ರಸ್ತೆ, ಸಿ ಅಂಡ್ ಡಿ ಬ್ಲಾಕ್<br>ಮೈಸೂರು – ೨೩. | ೧,೦೦೧.೦೦ |
| ೩೬೧. | **ಶ್ರೀ ಕೃಷ್ಣರಾಜು**<br>ನಂ. ಸಿ. ೩೯, ೧೩ನೇ 'ಎ' ಕ್ರಾಸ್<br>೮ನೇ ಮುಖ್ಯರಸ್ತೆ, ಬಿ.ಟಿ.ಎಂ. ೨ನೇ ಸ್ಟೇಜ್<br>ಎನ್.ಎಸ್.ಪಾಳ್ಯ, ಬೆಂಗಳೂರು – ೭೬ | ೧೧೦೧.೦೦ |

(ಮುಂದುವರಿಯುತ್ತದೆ)

